ಕಲ್ಪನಾ ಗ್ರಂಥಮಾಲೆ—೧೦



# ಕರ್ನಾಟಕದ ಸಮರ ಭೇರಿ

ಶ್ರೀಧರ ತೆಲ್ಕರ್

ಹಿರೇಮಲ್ಲೂರ ಈಶ್ವರನ್





ಪನಾ ಗ್ರಂಥ ಪ್ರಕಾಶನ ಸಮಿತಿ
ಹುಬ್ಬಳ್ಳಿ

ಕಲ್ಪನಾ ಗ್ರಂಥಮಾಲಾ — ೧೦

# ಕರ್ನಾಟಕದ ಸಮರ ಭೇರಿ

ಲೇಖಕರು:
**ಶ್ರೀಧರ ತೇಲಕರ**
**ಹಿರೇಮಲ್ಲೂರ ಈಶ್ವರನ್**





ಕಲ್ಪನಾ
ಗ್ರಂಥಪ್ರಕಾಶನ ಸಮಿತಿ, ಹುಬ್ಬಳ್ಳಿ.

೧೯೫೧ ಬೆಲೆ: ೨—೦—೦

ಮುದ್ರಕರು:
ಶ್ರೀ ಎಂ. ಜಿ. ವಿರೂಪಾಕ್ಷನ್,
ವ್ಯವಸ್ಥಾಪಕರು:
ಮೃತ್ಯುಂಜಯ ಮುದ್ರಣಾಲಯ,
ಕಿಲ್ಲೆ, ಧಾರವಾಡ
ಮತ್ತು
ಶ್ರೀ. ವೀ. ರು. ಕೊಪ್ಪಳ, ಸುಪರಿಂಟೆಂಡೆಂಟ,
ತೋಂಟದಾರ್ಯ ಮುದ್ರಣಾಲಯ, ಧಾರವಾಡ.





ಪ್ರಕಾಶಕರು:
ಜಿ. ಬಿ. ಶಂಕರರಾವ
ಕಾರ್ಯದರ್ಶಿ
ಕಲ್ಪನಾಗ್ರಂಥ ಪ್ರಕಾಶನ ಸಮಿತಿ
ಹುಬ್ಬಳ್ಳಿ

# ಪರಿವಿಡಿ





ಪುಸ್ತಕಗಳು ದೊರೆಯುವ ಸ್ಥಳ:

ವಸಂತ ತೇಲಕರ,
೧೭೧ ಬಿ. ಸಿ. ಕ್ಯಾಂಪ ಬೆಳಗಾವಿ.

ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ.

ಮತ್ತು
ಕರ್ನಾಟಕದ ಎಲ್ಲ ಪ್ರಸಿದ್ಧ ಪುಸ್ತಕ ವ್ಯಾಪಾರಿಗಳಲ್ಲಿ.

# ಅರ್ಪಣ



ಕನ್ನಡ

ನಾಡು, ನುಡಿಗಳ ಸೇವೆಗಾಗಿ

ತನು ಮನ ಧನಗಳನ್ನು ನೀಡಿ

ದುಡಿಯುತ್ತಿರುವ

ಶ್ರೀಮಂತ

ಬಸವರಾಜ ದೇಸಾಯಿ

ಹಂಗರಕಿ

ಅವರಿಗೆ



# ಮುನ್ನುಡಿ

೧೯೨೭ ನೆಯ ಇಸವಿಯ ದಶಂಬರ ತಿಂಗಳು. ಕಿಸೆಯಲ್ಲಿ ಒಂದು ಸಾವಿರ ರೂಪಾಯಿ ಇರಿಸಿಕೊಂಡು ಶ್ರೀಧರ ತೇಲ್ಕರ್, ಮುಂಬಯಿ ಹಡಗ ವನ್ನೇರಿ, ಇಂಗ್ಲಂಡಿಗೆ ಪ್ರಯಾಣ ಬೆಳೆಸಿದರು. ಬಾರ್ ಲ್ಯಟ್ ಲಾ ಅಭ್ಯಾಸ ಮಾಡಬೇಕೆಂಬ ಹಂಬಲ. ಹಡಗ ಇಳಿದು, ಲಂಡನ್ ನಗರವನ್ನು ಸೇರಿದ ಮೇಲೆ, ಒಂದು ತಿಂಗಳು ಪೂರ್ತಿಯಾಗಿ ಕಳೆಯಲಿಲ್ಲ. ಕಿಸೆ ಬರಿದಾ ಯಿತು. ಊರ ಕಡೆ ನೋಡಿದರೆ ಒಂದು ಕಾಸಿನ ಸಹಾಯವೂ ಇಲ್ಲ. ಲಂಡನ್ ನಗರದಲ್ಲಿ ಕೆಲಸ ಹಿಡಿಯಬೇಕೆಂದರೆ, ಮುಂದಕ್ಕೆ ಬಾ ಎನ್ನುವವ ರಿಲ್ಲ. ಅಲ್ಲಿಗೆ ಶ್ರೀಧರರ ಸಾಹಸ ಜೀವನದ ಒಂದು ಘಟ್ಟ ಮುಗಿದು ಅವರ ಬದುಕಿನಲ್ಲಿ ನವೋದಯ ಪ್ರಾರಂಭವಾಯಿತೆನ್ನಬೇಕು.

ಮಹತ್ವಾಕಾಂಕ್ಷೆಯಿಂದ ಪ್ರೇರಿತನಾದವನ ಇದಿರು ನಿರಾಶಾವಾದದ ಕಾಳೋರಗ ಹೆಡೆಯೆತ್ತಿ ನಿಲ್ಲಲಾರದು. ಏನು ಮಾಡೀತು ಅದು? ಅಂತ ನಿರಾಶೆ ಬರುತ್ತವೆ, ಹೋಗುತ್ತಿವೆ. ಏನುಂಟೋ, ಬರುವ ಕಾಲಕ್ಕೊಮ್ಮೆ ಬಂದು ಬಿಡಲಿ; ಎಂದು ಮೈಕೊಡವಿ ನಿಂತರೆ ಸಾಕು; ಅಲ್ಲಿಗೆ ಅದರ ಕತೆ ಮುಗಿಯುತ್ತಿದೆ. ಶ್ರೀಧರರಿಗೆ ಬಹಳ ತೊಂದರೆ ಬಂದವು. ಮೈಮೇಲೆ ತೊಟ್ಟಿದ್ದ ಅಂಗಿಯನ್ನು ಕ್ರಯಕ್ಕೆ ಹಚ್ಚುವದರ ಮಟ್ಟಿಗೆ ಪರಿಸ್ಥಿತಿ ಬಂದಿತು. ಆದರೆ ಸೋಲೆಂಬುದನ್ನೇ ಅರಿಯದ ತೇಲ್ಕರ್ ಅದನ್ನು ಮಾರಿ ಲಂಡನ್ ನಗರದ ಬೀದಿಯಲ್ಲಿ ತಿರುಗುತ್ತಿರುವಾಗ, ಅಗೋ ಆಶೆಯ ಕೋಲ್ಮಿಂಚು!

ಹಿಂದೀ ಹುಡುಗನೊಬ್ಬನು ಆಯರ್ಲಂಡದ ದೇಶದ ಹುಡುಗಿಯನ್ನು ಒಲಿದಿದ್ದಾನೆ. ಅವರ ಪ್ರಣಯದ ಕತೆ ಕಟ್ಟಿ ತೇಲ್ಕರ್ 'ಪೂರ್ವ ಪಶ್ಚಿಮ ಗಳು ಸಂಧಿಸಿದಾಗ' ಎಂಬ ಕಾದಂಬರಿ ಬರೆದರು. ವಾರಗಳೂ ಕಳೆಯಲಿಲ್ಲ. ಕಾದಂಬರಿ ಅವರಿಗೆ ಬದಕುವ ಧೈರ್ಯವನ್ನು ತಂದು ಕೊಟ್ಟಿತು. ಆಶಾ ವಾದಿಯಾದ ಬೆಳಗಾಂವಿಯ ಈ ಯುವಕ ಒಮ್ಮೆ ಫ್ಲೀಟ ಬೀದಿಯ ಕಡೆಗೂ ನೋಡಿದರು. ಲಂಡನ್ ರಾಜಧಾನಿಯ ಫ್ಲೀಟ ಬೀದಿಗೆ ಇರುವ ಗರುವವೇ

ಗರುವ. ಆ ಕಾಲಕ್ಕೆ ಹಿಂದೀಯರು ಆ ಬೀದಿಯಲ್ಲಿ ತಲೆಯೆತ್ತಿ ಕೂಡ ನಡೆಯಲಾರದ ಸಂದರ್ಭ. ಆದರೆ ಗಟ್ಟಿ ಮನಸ್ಸು ಮಾಡಿ ಶ್ರೀಧರ ಕಾಲಿರಿಸಿದಾಗ ಫ್ಲೀಟ ಬೀದಿ ಪಿಟ್ಟೆನ್ನಲಿಲ್ಲ. ಆದರೂ ಹಿಂದೀಯರ ಮೇಲಿನ ದ್ವೇಷವನ್ನು ಮರೆಯದ ರಾಜಧಾನಿಯ ಆ ಮೂರ್ಖ ಬೀದಿ, ತೇಲ್ಕರರಿಗೆ ಮುಂದೆ ಹೆಜ್ಜೆಯನ್ನಿಡಲು ಅವಕಾಶ ಕೊಡದಾಗ ಅವರು ಲಂಡನ್ನಿನ ಪತ್ರಿಕೆಗಳ ಕಡೆಗೊಮ್ಮೆ ನೋಡಿದರು.

ಶ್ರೀಧರರ ಜಾತಕದಲ್ಲಿ ಇದ್ದ ಸಂಕಲ್ಪವೇ ಬೇರೆ. ಇಲ್ಲಿಯ ವರೆಗೆ ಅವರು ನಡಸಿದ ಹೋರಾಟವೇ ಬೇರೆ. 'ವೃತ್ತ ಪತ್ರಿಕಾ ಕರ್ತನಾಗಬೇಕು ನೀನು' ಎಂದು ದೈವದ ಇಷ್ಟವಿದೆ. ಅದನ್ನು ಬಿಟ್ಟು ಬ್ಯಾರಿಸ್ಟರ್ ಆಗಬೇಕು ಕಾದಂಬರೀ ಕಾರನಾಗಬೇಕು; ಎಂದು ಹಂಬಲಿಸಿದರೆ ಹೇಗೆ ಸಾಧ್ಯವಾದೀತು?

ಶ್ರೀಧರರು ಲಂಡನ್ನಿನಲ್ಲಿ 'Satire and Burlesque'? ಎಂಬ ಹಾಸ್ಯಪೂರಿತ ಮಾಸಿಕ ಪತ್ರವನ್ನು ಹೊರಡಿಸಿದರು. ಭಾರತೀಯನೊಬ್ಬನಿಂದ ಸಂಪಾದಿತವಾಗುತ್ತಿದ್ದ ಈ ಪತ್ರಿಕೆ ಬ್ರಿಟಿಷರ ಮೆಚ್ಚುಗೆಯನ್ನು ಸಂಪಾದಿಸಿತು. ಬ್ರಿಟನ್ನಿನಲ್ಲಿ ಭಾರತೀಯರ ಪರವಾಗಿ ಹತ್ತು ವರುಷ ರಾಜಕೀಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ ಗೌರವ ಶ್ರೀ ತೇಲಕರರಿಗೆ ಇದೆ. ಭಾರತದ ಸುದ್ದಿ ಸಂಗತಿಗಳನ್ನು ಬ್ರಿಟನ್ನಿನ ಹಾಗು ಯುರೋಪ ಮತ್ತು ಅಮೆರಿಕನ್ ವಾರ್ತಾ ಪತ್ರಿಕೆಗಳಿಗೆ ಕಳಿಸುವ ಸಲುವಾಗಿ 'Oriental News Agency' ಎಂಬ ಸಂಸ್ಥೆಯನ್ನು ಲಂಡನ್ನಿನಲ್ಲಿ ಸ್ಥಾಪಿಸಿ, ಅದರ ಮೂಲಕ ಸಾಕಷ್ಟು ಕಾರ್ಯಮಾಡಿದ್ದಾರೆ ತೇಲಕರರು.

ಬರ್ನಾರ್ಡ್ ಶಾ, ಡಿ ವ್ಹೆಲೆರಾ, ಚರ್ಚಿಲ್, ಅ್ಯಟ್ಲಿ, ಹೆರಾಲ್ಡ ಲಾಸ್ಕಿ, ಫೀಲ್ಡ ಮಾರ್ಶಲ್ ವಾವೆಲ್–ಅವರೊಡನೆ ಹೇಗೊ ಸಂದರ್ಶನ ಪಡೆದು ಲಂಡನ್ನಿನ ಸುಪ್ರಸಿದ್ಧ ದಿನ ಪತ್ರಿಕೆಗಳಾದ 'ಡೇಲಿ ಹೆರಾಲ್ಡ' ಮುಂತಾದವುಗಳಿಗೆ ತಮ್ಮ ಅನುಭವಗಳನ್ನು ಬರೆದಾಗ ಸಂಪಾದಕರು 'ಯಾರಿವನು?' ಎಂದು ಶ್ರೀಧರರ ಕಡೆಗೆ ನೋಡಿದರು. ಶ್ರೀಧರ ನಕ್ಕರು. ಅವರ ನಗೆ ಅರ್ಥ ಪೂರ್ಣ ನಗೆ. ವೃತ್ತ ಪತ್ರಿಕಾ ಕರ್ತನ ನಗೆ. ಅದರಲ್ಲಿ ವ್ಯಂಗ್ಯತೆಯಿದ್ದಿತು, ಕಟುತ್ವವಿದ್ದಿತು, ನೋವಿದ್ದಿತು. ಇಪಿ ಫಕೀರನ ಜೀವನ ಪರಿ

ಚಯುವನ್ನು ಕುರಿತು ಅವರು ಬರೆದ ಒಂದು ಬರಹ—ವಿಶ್ವದ ಪತ್ರಿಕೆಗಳಲ್ಲೆಲ್ಲ ಬೆಳಕು ಕಂಡಿತು. ಅದೊಂದೇ ಲೇಖನ ಎಂಟುನೂರು ಪೌಂಡು ಗೌರವ ಧನ ಸಂಪಾದಿಸಿತು.

ಹಣ ಅವರಿಗೆ ಕಾಲ ಕಸ. ಸಿರಿ ಚಂಚಲೆ. ಲೇಖಕರಿಗೂ ಅವಳಿಗೂ ಯಾಕೊ? ಏನೋ? ಆಗುವುದಿಲ್ಲ. ಒಮ್ಮೆ ಪ್ರೇಮ, ಒಮ್ಮೆ ವೈಯ್ಯಾರ ಇನ್ನೊಮ್ಮೆ ಜಗಳ, ಇನ್ನೊಮ್ಮೆ ಬಿಡುಗಡೆ. ಕಿಸೆ ತುಂಬಿದ ಹೊತ್ತಿನಲ್ಲಿ ಶ್ರೀಧರರದು ಮುಕ್ತಹಸ್ತ. ಅಂತೂ 'ಗೋಲ್ಡಸ್ಮಿತ್'ನ ಗೆಳೆಯ ಈ ನಮ್ಮ ತೇಲ್ಕರ್! ಲಂಡನ್ನಿನ ಬಿ. ಬಿ. ಸಿ. ಬಾನುಲಿಯಲ್ಲಿ ಅವರಿಗೆ ಕೆಲಸ. ವಾರ್ತಾ ಪತ್ರಿಕೆಗಳು ಅವರನ್ನು ಬಿಡಲಾರವು. ಪ್ರಕಾಶಕರೂ ನೆರವಿಗೆ ಇದ್ದಾರೆ. ಜಾಗತಿಕ ವ್ಯಕ್ತಿಗಳ ಪರಿಚಯು ಆಗ ಸಾಕಷ್ಟು ಆಯಿತು. ನಿಜ. ಆದರೆ ಹಣವೇ ಸಾಕಾಗಲೊಲ್ಲದಲ್ಲ?

ಆಗ ಲಂಡನ್ ನಗರದ ಮೇಲೆ ಬಾಂಬು ದಾಳಿ ಸುರುವಾಗಿದ್ದಿತು. ಶ್ರೀಧರರು ಎ. ಆರ್. ಪಿ. ಸದಸ್ಯರಾಗಿದ್ದರು. ಒಮ್ಮೆ ದಾಳಿಗೆ ಆಹುತಿಯಾಗಿ ಅವರು ಮೂರು ತಾಸು ನೆಲದಲ್ಲಿ ಹೂಳಿ ಹೋಗಿದ್ದರು. ಆದರೆ ಬದುಕಿದರು.

ಇಪ್ಪತ್ತು ವರುಷ ಬ್ರಿಟನ್ನಿನ ರಾಜಧಾನಿಯಲ್ಲಿ ಕಾಲ ಕಳೆದು ಕನ್ನಡ ನಾಡಿನ ಬೆಳಗಾವಿಗೆ ಮರಳಿ ಬರುವಾಗ ಶ್ರೀಧರ ಏನು ತಂದರು? ಬಿರುದುಗಳನ್ನೆ, ಪದವಿಯನ್ನೆ, ಸಿರಿವಂತಿಕೆಯನ್ನೆ? ಹೋಗುವಾಗ ಸಾವಿರ ರೂಪಾಯಿಯನ್ನಾದರೂ ಒಯ್ದಿದ್ದರು. ಬರುವಾಗ? ಅದೂ ಇಲ್ಲ. ಹರಿದ ಬಟ್ಟೆ. ಹಸಿದ ಒಡಲು. ಹೋಗುವಾಗ ಇದ್ದ ಜ್ಞಾನಾರ್ಜನೆಯ ದಾಹ ಇನ್ನೂ ಹಾಗೆಯೇ ಇದೆ!

ಇಂಗ್ಲಂಡಿನ ಸುಪ್ರಸಿದ್ಧ ಪತ್ರಿಕಾಲಯುಗಳಲ್ಲಿ ದುಡಿದ ಅನುಭವವಿದೆ. ಅನುಭವವನ್ನು ಕಾರ್ಯರಂಗಕ್ಕಿಳಿಸುವ ಉತ್ಸಾಹವೂ ಇದೆ. ದುಡ್ಡಿದ್ದವರು ಸಿಗಬೇಕು. ಸಿಕ್ಕರೆ ವಾರ್ತಾ ಸಂಸ್ಥೆಯನ್ನು ತೆಗೆಯಬೇಕು. ತನ್ಮೂಲಕ ನಾಡನ್ನು ಕಟ್ಟಬೇಕೆಂಬ ಹಂಬಲ ಶ್ರೀಧರರದು!

ಮುಂಬಯಿಯಲ್ಲಿ ನಿಂತದ್ದೂ ಆಯಿತು. ಈ ಕಾರ್ಯದಲ್ಲಿ ಇನ್ನೊಂದು ಜೀವ ಶ್ರೀಧರರ ನೆರವಿಗೆ ಬಂದಿತು. ಆಕೆ ಪ್ರೇಮಾ. ಚಿರ ಸಂಗಾತಿಯಾಗಿ ಬಂದ ಪ್ರೇಮಾ ಮತ್ತು ಶ್ರೀಧರರು ಕೂಡಿಕೊಂಡು 'ಇಂಡಿಯನ್ ಪ್ರೆಸ್ ಅಸೋಸಿಯೇಶನ್' ತೆರೆದರು. ಸಂಸ್ಥೆ ಸಾಕಷ್ಟು ಧನ ಸಹಾಯವಿಲ್ಲದೆ ಕುಂಟಿಗೋ ಕೂರಿಗೋ ಎನ್ನುತ್ತಿದ್ದ ಕಾಲದಲ್ಲಿ ದೇಶ ಸ್ವಾತಂತ್ರ್ಯವನ್ನು ಪಡೆಯಿತು. ದೇಶ ಸ್ವಾತಂತ್ರ್ಯವನ್ನು ಪಡೆಯಿತೇ ಎನ್ನುವ ಹೊತ್ತಿನಲ್ಲಿ ಪ್ರಾಂತೀಕರಣದ ಅಬ್ಬರದ ಚಳವಳಿ ಪ್ರಾರಂಭ ವಾಯಿತು.

ಕೊಟ್ಟಮಾತು ಕಾಂಗ್ರೆಸ್ ಮುರಿಯುತ್ತಿರುವದನ್ನು ಶ್ರೀಧರ ಕಂಡರು. ಅವರ ಊರು ಬೆಳಗಾವಿ. ಬೆಳಗಾವಿ ಕನ್ನಡ ನಾಡಿನ ಗಂಡುಮೆಟ್ಟಿನ ನಾಡು; ನಿಜ. ಆದರೆ ಬಳಕೆಯಲ್ಲಿ; ಊರೂರು ತಿರುಗುವ ಹೊತ್ತಿನಲ್ಲಿ ಮರಾಠಿ ಅವರ ತುಟಿಗೆ ಬಂದಿತು. ಅದರೂ ಕನ್ನಡದ ಮೇಲಿನ ಪ್ರೇಮ 'ಮರೆಯಾಗು' ಎಂದರೆ ಹೇಗೆ ಮರೆಯಾದೀತು?

ಮುಂಬಯಿ ಬಿಟ್ಟು ಶ್ರೀಧರ ತಾಯ್ನಾಡಾದ ಕನ್ನಡ ನಾಡಿಗೆ ಓಡಿ ಬಂದರು. ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮೀಟಿ ಕನ್ನಡ ನಾಡಿನ ಏಕೀಕರಣದ ಚಳವಳಿಯನ್ನು ಕೈಕೊಂಡಿದ್ದಿತು. ತೇಲ್ಕರರು ಅದನ್ನು ನೆರಳಿನಂತೆ ಹಿಂಬಾಲಿಸಿ ಅದರ ಚಟುವಟಿಕೆಗಳನ್ನು ಪರಿಶೀಲಿಸಿದರು. ಈ ಕಾಲದಲ್ಲಿ ಬೆಳಗಾವಿ, ಮುಂಬಯಿ, ಹುಬ್ಬಳ್ಳಿಗಳ ನಡುವೆ ಅವರು ಬಿಡುವು ಇಲ್ಲದೆ ಓಡಾಡಿದರು. ಹೊಟ್ಟೆ ಬಟ್ಟೆಯ ಪರಿವೆಯಿಲ್ಲದೆ ಓಡಾಡಿದರು. ಹೊಸರಿತ್ತಿಯಲ್ಲಿ ರೈತರ ಸಭೆ ಕೂಡಿದ ಸುದ್ದಿಯನ್ನು ಕೇಳಿ ಮುಂಬೈಯಿಂದ ಹಾಗೇ ಬಂದರು. ಮೈಮೇಲಿನ ಬಟ್ಟೆ ಬದಲಿಸಲು ಇನ್ನೊಂದು ಬೇರೆ ಬಟ್ಟೆಯೂ ಹತ್ತಿರವಿರಲಿಲ್ಲ. ಕೊಂಡೇನೆಂದರೆ ಕಿಸೆಯಲ್ಲಿ ಕಾಸಿಲ್ಲ. ಕನ್ನಡವೇ, ನಿನ್ನ ಹೆಸರು ಅಮೃತ! ನಿನಗಾಗಿ ಹೊಟ್ಟೆ ಬಟ್ಟೆಯನ್ನು ಕಟ್ಟಿ ಹೋರಾಡುವದೇ ಒಂದು ಪುಣ್ಯ!

ಅಂತ ಹೋರಾಟಕ್ಕೆ ಸಾಕ್ಷಿ ಈ ಪುಸ್ತಕ. ಕನ್ನಡ ನಾಡಿನ ಮೇಲೆ ದೈವವೇ ಮುನಿದಿರುವಾಗ ಯಾರೇನು ಮಾಡಬೇಕಾಗಿದೆ? ನಡೆದ ಕರುಣದ

ಕತೆಯನ್ನು ಕನ್ನಡಿಗರಿಗೆ ಇದ್ದಂತೆ ವಿವರಿಸಿ:– ಬರುತ್ತೇನೆ. ನೆಪ್ಪಿರಲಿ. ನಮಸ್ಕಾರ! ಎಂದು ಶ್ರೀಧರ ಹೇಳುವ ಮಾತಿನಲ್ಲಿ ಕನ್ನಡದ ಮೇಲಿರುವ ಅವರ ಅಪಾರವಾದ ಕಳಕಳಿ ಯಾರಿಗೆ ಅರ್ಥವಾಗದೆ ಇದ್ದೀತು? ಇದ್ದ ಮಾತು ಇದ್ದಂತೆ ಹೇಳಿದ್ದಾರೆ. ಹಾಗೆ ಹೇಳುವದೇ ಪತ್ರಿಕಾಕರ್ತನ ಧರ್ಮ. ಆ ಧರ್ಮಕ್ಕೆ ಹೊರಗಾದವರಿಗೆ ಈ ಮಾತು ಕೆಂಡದಂತೆ ಕಂಡರೆ ಅದರಿಂದ ಶ್ರೀಧರರಿಗಾಗಲಿ, ನನಗಾಗಲಿ ಏನು ಆಗಬೇಕಾಗಿದೆ? ಯಾರು ಮುನಿದು ನಮ್ಮನ್ನೇನು ಮಾಡುವರು? ನ್ಯಾಯ ನಿಷ್ಠುರ, ಲೋಕ ವಿರೋಧಿ, ಶರಣ ನಾನಾರಿಗೂ ಅಂಜುವವನಲ್ಲವಲ್ಲ!

ಕನ್ನಡ ನಾಡಿನ ಹೋರಾಟದ ಕತೆ ಇನ್ನೂ ಮುಗಿದಿಲ್ಲ. ಮುಗಿದಿದೆಯೆಂದು ತಿಳಿದುಕೊಳ್ಳುವವರ ಕತೆಯೂ ಮುಗಿದಿದೆಯೆಂದು ತಿಳಿದುಕೊಳ್ಳಬೇಕಷ್ಟೆ. ವಡವಾಗ್ನಿಯಂತೆ, ಲಾವಾ ರಸದಂತೆ ಕನ್ನಡಿಗರು ಒಳಗಿಂದೊಳಗೆ ಕುದಿಯುತ್ತಿದ್ದಾರೆ. ನಾಳೆಯೋ, ನಾಡದೋ ಮುಗಿಯದ ಈ ಕತೆ ಮುಂದುವರಿಯಲಿದೆ. ಆ ಕಾಲಕ್ಕೆ ಹಿಂದೆ ನಡೆದ ಈ ಕತೆಯನ್ನೂ, ಈ ಕತೆಯಲ್ಲಿಯ ಹೋರಾಟವನ್ನೂ, ದುಷ್ಟ ಪಾತ್ರಗಳನ್ನೂ ಅಭ್ಯಸಿಸಿ, ದಾರಿ ತಪ್ಪಿದಲ್ಲಿ ಅದನ್ನು ತಿದ್ದಿಕೊಂಡು, ಮುಂದಿನ ಹೋರಾಟಕ್ಕೆ ನಮ್ಮ ಜನ ಸನ್ನದ್ಧರಾಗಬೇಕೆಂಬಾಶಯದಿಂದ ಈ ಪುಸ್ತಕವನ್ನು ಬರೆದಿದ್ದೇವೆ. ಇಷ್ಟನ್ನು ಈ ಪುಸ್ತಕ ಸಾಧಿಸಿದರೆ ಸಾಕು, ಇದಕ್ಕಿಂತ ಹೆಚ್ಚಿಗೆ ಏನನ್ನೂ ನಾವು ಬಯಸುವದಿಲ್ಲ.

ನಮಸ್ಕಾರ. ಕನ್ನಡದ ಜನಶಂಕರಿ ಕನ್ನಡಿಗರ ದಾರಿಯನ್ನು ಕಾಯಲಿ.

ಹುಬ್ಬಳ್ಳಿ
೧-೨-೫೧

ಹಿರೇಮಲ್ಲೂರ ಈಶ್ವರನ್

# ಅರಿಕೆ

"ಕರ್ನಾಟಕದ ಸಮರ ಭೇರಿ"ಯ ಮೊದಲನೆಯ ಹನ್ನೊಂದು ಬರಹವನ್ನು ಶ್ರೀಧರರು ಮೊದಲು ಆಂಗ್ಲ ಭಾಷೆಯಲ್ಲಿ ಬರೆದರು. ಶ್ರೀ ಹಿರೇಮಲ್ಲೂರರು ಅದನ್ನು ಕನ್ನಡಕ್ಕೆ ತಂದಿರುವರು. "ಕಾರವಾರದ ಯಾತ್ರೆಯಿಂದ' "ಕನ್ನಡಿತಿಯ ಆಹ್ವಾನ"ದ ವರೆಗಿನ ಲೇಖನಗಳನ್ನು ಈಶ್ವರನ್ನರು ಬರೆದಿದ್ದಾರೆ. 'ಐಕ್ಯತೆಯಲ್ಲಿ ಭಿನ್ನತೆ' 'ಕಾರವಾರವೂ ಕೊಂಕಣಿಗರೂ' 'ಆಂಧ್ರರೂ ಬಳ್ಳಾರಿಗರೂ' ಈ ಮೂರು ಬರಹಗಳು ವಾದಗ್ರಸ್ತವಾದ ಕನ್ನಡದ ನೆಲದ ಮೇಲೆ ಬೆಳಕನ್ನು ಚಲ್ಲುವವು. 'ಪ್ರಶ್ನೆಗೆ ಉತ್ತರ'ದಲ್ಲಿ ಮೈಸೂರು ಮತ್ತು ಒಕ್ಕೂಟ ಕರ್ನಾಟಕದ ಆರ್ಥಿಕ ಸಿಂಹಾವಲೋಕನವಿದೆ. ಇಡಿಯುದಾಗಿ ಈ ಪುಸ್ತಕವನ್ನು ನೋಡಿದರೆ ಅದು ಸಮಗ್ರ ಕನ್ನಡದ ಬದುಕನ್ನು ಸಿಂಹಾವಲೋಕನ ಕ್ರಮದಿಂದ ವಿವರಿಸಿರುವುದೆಂದು ಹೇಳಬಹುದು.

ಇಲ್ಲಿಯ ಕೆಲವು ಬರಹಗಳು 'ಭಾರತ ಜ್ಯೋತಿ' 'ಫ್ರೀಪ್ರೆಸ್' 'ಈವ್ನಿನಿಂಗ ಸ್ಟ್ಯಾಂಡರ್ಡ' ಮುಂತಾದ ಇಂಗ್ಲಿಷು ಪತ್ರಿಕೆಗಳಲ್ಲಿ ಬಂದವು. 'ಕನ್ನಡತಿಗೆ ಆಹ್ವಾನ' 'ನವಯುಗ'ದಲ್ಲಿ ಪ್ರಕಟವಾಗಿದ್ದಿತು. ಈ ಗ್ರಂಥ ಬೆಳಕಿಗೆ ಬರುವಲ್ಲಿ ಗೆಳೆಯರಾದ ತಿ. ಸಿದ್ದಪ್ಪನವರು ನೆರವಾಗಿದ್ದಾರೆ. ಅವರಿಗೂ ಧಾರವಾಡದ ತೊಂಟದಾರ್ಯ ಮತ್ತು ಮೃತ್ಯುಂಜಯ ಮುದ್ರಣಾಲಯದವರಿಗೂ ನಮ್ಮ ಕೃತಜ್ಞತೆಗಳು ಸಲ್ಲಬೇಕು.

ಶ್ರೀ. ಹಿರೇಮಲ್ಲೂರ ಈಶ್ವರನ್‌ರು ಬರೆದಿರುವ "ಕಮಲಳಿಗೆ ಕಾಗದಗಳು" ಎಂಬುದು ನಮ್ಮ ಗ್ರಂಥಮಾಲೆಯ ಮುಂದಿನ ಪ್ರಕಟಣೆ. ಮಾರ್ಚ ತಿಂಗಳಿನಲ್ಲಿ ಬರಲಿದೆ. ಎಂದಿನಂತೆ ಪ್ರಕಾಶನ ಸಮಿತಿಯು ಕನ್ನಡಿಗರ ಸಹಕಾರ, ಪ್ರೇಮ, ವಿಶ್ವಾಸಗಳನ್ನು ಕೋರುತ್ತದೆ.

ಕಲ್ಪನಾಗ್ರಂಥ ಪ್ರಕಾಶನ ಸಮಿತಿ
ಹುಬ್ಬಳ್ಳಿ
೧—೨—೧೯೫೧

**ಜಿ. ಬಿ. ಎಸ್. ರಾವ್**

# ಕಾಳಗದ ದಾರಿಯಲ್ಲಿ

ಆಂಧ್ರ ಪ್ರಾಂತ ನಿರ್ಮಾಣದ ಆವಶ್ಯಕತೆಯನ್ನು ಎತ್ತಿ ಹೇಳುವುದರ ಜೊತೆಗೆ ಕರ್ನಾಟಕ ಪ್ರಾಂತ ನಿರ್ಮಾಣದ ಪ್ರಶ್ನೆಯನ್ನು ಅನಿಯಮಿತ ಅವಧಿಯವರೆಗೆ ಕಾಂಗ್ರೆಸ್ ಕಾರ್ಯವಾಹಕ ಮಂಡಲಿಯು ಮುಂದೂಡಿದ ಸಂಗತಿ ಕನ್ನಡಿಗರಿಗೆ ವಜ್ರಾಘಾತವಾದಂತಾಯಿತು. ಹೊಸ ರಾಜ್ಯ ಘಟನೆಯನ್ನು ಘಟನಾಸಭೆಯು ಒಪ್ಪಿಕೊಂಡಿದ್ದರೂ ತಮ್ಮ ಬದುಕಿನ ಇಹಪರವಾದ ಅಖಂಡ ಕರ್ನಾಟಕದ ಕನಸು ನನಸಾಗುವವರೆಗೂ ಕನ್ನಡಿಗರಿಗೆ ಶಾಂತಿ ಸಮಾಧಾನವಿಲ್ಲ. ಮೈಸೂರನ್ನೊಳಗೊಂಡ ಬೃಹತ್ ಕರ್ನಾಟಕವು ಈ ವರುಷದವಧಿಯಲ್ಲಿ ಮೂಡದೆ ಹೋದಲ್ಲಿ ಪ್ರಾಂತದಲ್ಲಿ ಸಾಮೂಹಿಕ ಚಳವಳಿಯನ್ನು ಜನತೆ ಹೂಡಬಹುದೆಂಬ ಹೆದರಿಕೆಯನ್ನು ಗುರುತರವಾದ ಹೊಣೆ ಹೊತ್ತಿರುವ ರಾಜಕೀಯ ಸಂಸ್ಥೆಗಳು ಹಾಕಿವೆ. ಕರ್ನಾಟಕವು ಸಮರ ಭೇರಿಯನ್ನು ಬಾರಿಸುತ್ತದೆ. ಕನ್ನಡಿಗರು ಕಾಳಗದ ದಾರಿಯಲ್ಲಿ ವೀರ ಸೇನಾನಿಗಳಂತೆ ಮುನ್ನಡೆಯುತ್ತಿದ್ದಾರೆ.

ಕರ್ನಾಟಕವು ಒಂದೇ ಆಡಳಿತಕ್ಕೆ ಒಳಪಟ್ಟಿಲ್ಲ. ಅದಕ್ಕೇನೆ ಶೀಘ್ರದಲ್ಲಿ ಕರ್ನಾಟಕ ಪ್ರಾಂತ ನಿರ್ಮಾಣದ ಪ್ರಶ್ನೆಯಿಲ್ಲವಂತೆ! ಇದು ಕಾಂಗ್ರೆಸ್ ಕಾರ್ಯವಾಹಕ ಮಂಡಲಿಯ ತೀರ್ಪು! ನೂತನ ಕರ್ನಾಟಕ ಪ್ರಾಂತದ ಬಹುಭಾಗವು ಮೈಸೂರಿನಲ್ಲಡಕವಾಗಿದೆ. ಮೈಸೂರು ಹಿಂದೀ ಒಕ್ಕೂಟದಲ್ಲಿ ಸಮಾವೇಶವಾಗಿದ್ದರೂ ಘಟನಾತ್ಮಕ ಅಧಿಪತಿಗಳಾದ ಮಹಾರಾಜರ ಆಡಳಿತಕ್ಕೆ ಅದು ಒಳಗಾಗಿದೆ. ಕನ್ನಡವೆ ತಾಯ್ನುಡಿಯಾಗಿರುವ ಕನ್ನಡಿಗರ ಇನ್ನು ಕೆಲವು ಜಿಲ್ಲೆಗಳು ಮುಂಬೈ, ಮದರಾಸು, ಹೈದರಾಬಾದು ಮತ್ತು ಕೊಡಗಿನಲ್ಲಿ ಸೇರಿಕೊಂಡಿವೆ. ಕಾಂಗ್ರೆಸ್ಸಿನ ಅಧ್ಯಕ್ಷರಾದ ಡಾ. ಪಟ್ಟಾಭಿಯವರು 'ನವ ಕರ್ನಾಟಕದ ನಿರ್ಮಾಣದ ಪ್ರಶ್ನೆ ರಾಜಕಾರಣದಲ್ಲಿ ಅನವಶ್ಯಕವಾದ ಗೊಂದಲವನ್ನೆಬ್ಬಿಸುವ ಸಂಭವವಿದೆ' ಎಂದು ಹೇಳಿದಾಗ ಮೊದಲೇ ಗಾಯಗೊಂಡ ಕನ್ನಡಿಗರ ಮನಸ್ಸಿನ ಮೇಲೆ ಮತ್ತೆ ಬರೆಯೆಳದಂತಾಯಿತು. ಸಮಸ್ತ ಕನ್ನಡನಾಡು ಪಟ್ಟಾಭಿಯವರನ್ನು ಕಿಡಿಗಣ್ಣಿನಿಂದ ನೋಡಿತು.

'ಮುಖ ಉಳಿಸಿಕೊಳ್ಳುವ ಉಪಾಯ,' 'ಕಿಡಿಗೇಡಿ ಬೇಡುವ ಕ್ಷಮಾಯಾಚನೆ'! ಹಾಗೆಂದು ಕರ್ನಾಟಕ ರಾಜಕೀಯ ವರ್ಗಗಳು ಪಟ್ಟಾಭಿಯವರ ಹೇಳಿಕೆಯ ಮೇಲೆ ತೀರ್ಮಾನು ಕೊಟ್ಟವೆ. ನವ್ಹಂಬರ ಆರನೆಯ ತಾರೀಖಿನಂದು ಮೈಸೂರು ಸಂಸ್ಥಾನ ಕಾಂಗ್ರೆಸ್ಸು ಮಹಾರಾಜರ ಘಟನಾತ್ಮಕ ಆಧಿಪತ್ಯದಲ್ಲಿ ಸಂಯುಕ್ತ ಕರ್ನಾಟಕ ಪ್ರಾಂತದ ನಿರ್ಮಾಣದ ಯೋಜನೆಯನ್ನು ಒಕ್ಕೊರಲಿನಿಂದ ಒಪ್ಪಿಕೊಂಡಿತು. ಮುಂದೆರಡು ದಿನಗಳಲ್ಲಿ ನವ್ಹಂಬರ ಎಂಟರಂದು ದಾವಣಗೆರೆಯಲ್ಲಿ ಕೂಡಿದ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ಸು ಮೈಸೂರು ಕಾಂಗ್ರೆಸ್ಸಿನ ಯೋಜನೆಯನ್ನು ಮುಕ್ತ ಮನಸ್ಸಿನಿಂದ ಒಪ್ಪಿಕೊಂಡಿತು. ಕಾಂಗ್ರೆಸ್ಸಿನ ಮೇಲ್ತರಗತಿಯ ವರ್ಗಕ್ಕೆ ಕರ್ನಾಟಕದ ನಿರ್ಮಾಣದ ಇಷ್ಟವಿಲ್ಲ! ಮಹಾರಾಜರ ಹೆಸರಿನ ಮರೆಯಲ್ಲಿ ನಿಂತುಕೊಂಡು ತಮ್ಮ ಕೈವಾಡವನ್ನು ನಡಸುವುದು ಅವರಿಗೆ ಬೇಕಾದಂತೆ ಕಾಣಿಸುತ್ತದೆಯೆಂಬ ಸಂದೇಹವೊಂದು ಕನ್ನಡಿಗರ ಮನಸ್ಸಿನಲ್ಲಿ ಬಲವತ್ತರವಾಗಿ ಮೂಡಿನಿಂತಿತು.

ಕಾಂಗ್ರೆಸ್ ಕಾರ್ಯವಾಹಕ ಮಂಡಲಿಯಲ್ಲಿ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ಸನ್ನು ಪ್ರತಿನಿಧಿಸುತ್ತಿರುವ ಶ್ರೀ. ಸಿದ್ದವನಹಳ್ಳಿ ನಿಜಲಿಂಗಪ್ಪ ಶಾಂತಿಯ ಪ್ರತೀಕ. ಕಳೆದ ಎರಡುವರೆ ವರುಷಗಳಿಂದ ಅವರು ಕನ್ನಡಿಗರಿಗೆ ತಾಳ್ಮೆಯಿಂದಿರಲು ಒಂದೇ ಸವನೆ ಬುದ್ಧೀ ಹೇಳಿದ್ದಾರೆ. ಕಾಂಗ್ರೆಸ್ಸು ಕನ್ನಡಿಗರ ಆಶೆ ಆಕಾಂಕ್ಷೆಗಳನ್ನು ಆಸ್ಥೆಯಿಂದ ಗಮನಿಸಬಹುದೆಂದು ನಿಜಲಿಂಗಪ್ಪ ಹೇಳಿದ ಸಮಾಧಾನ ಒಂದು ಮುಂಜಾನೆ ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದಂತಾಯಿತೆಂದು ಜನತೆಗೆ ತಿಳಿಯಿತು. ಅಷ್ಟೊತ್ತಿಗೆ ನಿಜಲಿಂಗಪ್ಪನವರ ಪ್ರಶಾಂತ ಮನಸ್ಸಿನ ಕಾಸಾರದಲ್ಲೂ ಅಸಮಾಧಾನದ ತೆರೆಗಳು ತಾಕಲಾಟವಾಡದೆ ಇರಲಿಲ್ಲ.

ಜನತೆಯ ಕೂಗು ನಾಡಿನ ತುಂಬ ಪ್ರತಿಧ್ವನಿಸುತ್ತಿದೆ. ಅವರ ತಾಳ್ಮೆ ಸಹನೆಯ ಹೊಸ್ತಿಲನ್ನು ಮೀರುತ್ತಿದೆ. ತಮ್ಮ ಕೈಮೀರಿ ಜನತೆಯಿನ್ನು ಮೇಲೆ ವರ್ತಿಸಬಹುದೆಂದು ಜನನಾಯಕರು ಒಂದೇ ಸವನೆ ಹೇಳಿಯೆ ಹೇಳುತ್ತಿದ್ದಾರೆ.

ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ಸಿನ ಸದಸ್ಯರೂ ಸಹನೆಯನ್ನು ಕಳೆದು

ಕೊಳ್ಳುತ್ತಿದ್ದಾರೆ. ನವ್ಹಂಬರ ಎಂಟರಂದು ಕೂಡಿದ ಕಾಂಗ್ರೆಸ್ ಸಭೆಯಲ್ಲಿ ಪ್ರಾಂತ ನಿರ್ಮಾಣದ ಪ್ರಶ್ನೆ ಅಲ್ಲೋಲ ಕಲ್ಲೋಲವಾದ ಬಿರುಗಾಳಿಯನ್ನೇ ಎಬ್ಬಿಸಿತು. ಮದರಾಸಿನ ಮಾಜಿಮಂತ್ರಿ ಕೋಟಿ ರಾಮಕೃಷ್ಣ ಕಾರಂತ, ಮತ್ತು ಇನ್ನೊಬ್ಬ ಸದಸ್ಯರು 'ಕರ್ನಾಟಕ ಪ್ರಾಂತನಿರ್ಮಾಣದ ಮಾತ ನ್ನೆತ್ತದ ಹೊಸ ರಾಜ್ಯಘಟನೆಯನ್ನು ಕನ್ನಡಿಗರು ಮನ್ನಿಸಬಾರದು' ಎಂಬ ಗೊತ್ತುವಳಿಯನ್ನು ತಂದಾಗ ಸಭೆಗೆ ಸಭೆಯೇ ಕಂಪನಗೊಂಡಿತು. ಭಾನುಲಿ ಮತ್ತು ವಾರ್ತಾ ಸಚಿವರಾದ ಶ್ರೀ. ಆರ್. ಆರ್. ದಿವಾಕರರು ಕಾರಂತರ ಹರಿತಾದ ಗೊತ್ತುವಳಿಯ ಮೊನೆಯನ್ನು ಮೊಂಡ ಮಾಡಬೇಕೆಂದು ಯತ್ನಿಸಿ ಹೇಳಬಾರದ ಸೋಲನ್ನು ಹೊಂದಿದರು. ಶ್ರೀಯುತರ ಗೊತ್ತುವಳಿ ಸರ್ವಾನು ಮತದಿಂದ ಸ್ವೀಕೃತವಾಗಿ ಹೋಯಿತು. ಮುಂಬೈ ಮಂತ್ರಿ ಮಂಡಲ ದಲ್ಲಿರುವ ಕರ್ನಾಟಕದ ಮಾನ್ಯಮಂತ್ರಿಗಳು ಸಭೆಯಲ್ಲಿ "ಮುತ್ಸದ್ದಿತನದ ಗೈರುಹಾಜರಿ" ಕೊಟ್ಟಿದ್ದರು.

ಕಾಂಗ್ರೆಸ್ಸಿನ ಅಧಿಕಾರಿ ವರ್ಗದ ತೀರ್ಪನ್ನು ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆಗಳು ಹಾಗೆಯೇ ಬಿಟ್ಟುಕೊಟ್ಟಾರೆಂದು ಹೇಳಲು ಸಾಧ್ಯವಿಲ್ಲ. ಕರ್ನಾಟಕ ವಣಿಕ ಸಂಘ ನವ್ಹಂಬರ ೨೩ ರಂದು ವಿಶೇಷ ಸಭೆ ಕರೆಯಿತು. ಕಾಂಗ್ರೆಸ್ಸಿನ ಕಾರ್ಯವಾಹಕ ಮಂಡಲಿಯರವರಿಗೆ ಆಹ್ವಾನವನ್ನಿತ್ತು ಸಾಮೂ ಹಿಕ ಚಳವಳಿಯನ್ನು ಕೈಕೊಳ್ಳುವುದಕ್ಕೆ ಹತ್ತು ಲಕ್ಷ ರೂಪಾಯಿಯ ನಿಧಿ ಸಂಗ್ರಹಿಸುವ ನಿರ್ಧಾರ ಮಾಡಿತು. ಕರ್ನಾಟಕ ಯುವಕ ಪರಿಷತ್ತು ಸಭೆ ಸೇರಿಸಿ ಸಂಯುಕ್ತ ಕರ್ನಾಟಕದ ಯೋಜನೆಯನ್ನು ಮಾನ್ಯ ಮಾಡಿ ಹೊಸ ರಾಜ್ಯಘಟನೆಯಲ್ಲಿ ಕರ್ನಾಟಕದ ಹೆಸರನ್ನು ಸೇರಿಸಬೇಕೆಂದು ಹಿಂದುಸ್ತಾನ ಸರಕಾರಕ್ಕೆ ಬಿನ್ನೈಸಿಕೊಂಡಿತು. ಈ ಗುರಿ ಸಾಧಿಸದೇ ಹೋದಲ್ಲಿ ಸರಕಾರ ಎಚ್ಚರಿಕೆ ವಹಿಸಲಿ! ಕನ್ನಡನಾಡು ಚಳವಳಿಯ ಅಸ್ತ್ರ ಹಿರಿದೀತು!

ಆಂಧ್ರ-ದೇಶದ ಪ್ರಶ್ನೆಯೊಂದಿಗೆ ಕನ್ನಡ ಪ್ರಾಂತ್ಯ ನಿರ್ಮಾಣದ ಪ್ರಶ್ನೆ ಗಂಟು ಹಾಕಿಕೊಂಡಿದೆಯೆಂದೂ ಕನ್ನಡದ ವಿಧಿಲೀಲೆಯ ಕೈವಾಡ ಅಲ್ಲಿಯೇ ಇದೆಯೆಂದೂ ಕರ್ನಾಟಕದ ಜನತೆ ಹೇಗೋ ನಂಬಿದ್ದಾರೆ. ಆಂಧ್ರಕ್ಕೆ ಪ್ರತ್ಯೇಕಪ್ರಾಂತದ ಪ್ರಾಶಸ್ತ್ಯದೊರೆಯುವುದಾದರೆ ಕರ್ನಾಟಕಕ್ಕೆ ಯಾಕೆ ದೊರಕಬಾರದೆಂದು ಅವರು ಸಹಜವಾಗಿಯೆ ಸವಾಲು ಹಾಕು

ತ್ತಿದ್ದಾರೆ. ಅವರ ಸಂದೇಹವನ್ನು ಬಲಪಡಿಸುವಂತೆಯೋ ಎಂಬಂತೆ ಗಡಿಯಂಚಿನಲ್ಲಿಯ ಕನ್ನಡ ಪ್ರದೇಶಗಳನ್ನು ಎತ್ತಿಹಾಕುವ ಆಂಧ್ರರ ಹೊಂಚು ಸಂಚುಗಳ ಮುನ್ನೋಟ ಅವರಿಗೆ ತಿಳಿದು ಬಂದಿದೆ. ಬಳ್ಳಾರಿಯಲ್ಲಿಯ ಮತ್ತು ಗಡಿಯಂಚಿನ ಇನ್ನು ಕೆಲ ಜಿಲ್ಲೆಗಳನ್ನು ಸಂದೇಹದ ತಕ್ಕಡಿಯ ಪರಡಿಯಲ್ಲಿಟ್ಟು ತೂಗುತ್ತ ಆಂಧ್ರರು ಅವುಗಳ ಮೇಲೆ ತಮ್ಮ ಹಕ್ಕನ್ನು ಪ್ರಸ್ಥಾಪಿಸಲೆತ್ನಿಸುತ್ತಿದ್ದಾರೆ. ಆಂಧ್ರ ಪ್ರಾಂತದಲ್ಲಿ ಆಂಧ್ರರು ಸಮಾವೇಶ ಮಾಡಬಯಸಿರುವ ಆದವಾನಿ, ರಾಯದುರ್ಗ ಮತ್ತು ಆಲೂರು ತಾಲೂಕಿನ ಕನ್ನಡಿಗರು ಪ್ರಚಂಡವಾದ ಸಭೆ ಸೇರಿಸಿ ಅವರ ಆಕ್ರಮಣ ಶೀಲ ಧೋರಣೆಯನ್ನು ಬಹಿರಂಗವಾಗಿ ಪ್ರತಿಭಟಿಸಿದರು.

ಸೀಮಾ ಸಮಿತಿಯಲ್ಲಿ ಕನ್ನಡಿಗರ ಸಂಕಷ್ಟಗಳನ್ನು ಮುಂದಿರಿಸಲು ಕನ್ನಡಿಗರಿಗೂ ಪ್ರಾತಿನಿಧ್ಯ ಕೊಡಬೇಕೆಂದು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ಸಿನ ನೇತಾರರಾದ ನಿಜಲಿಂಗಪ್ಪನವರು ಹೇಳಿಕೆಯನ್ನೂ ಪ್ರಕಟಿಸಿದರು.

ಕಾಂಗ್ರೆಸ್ಸಿನ ಕೇಂದ್ರ ಅಧಿಕಾರಿವರ್ಗ ಕರ್ನಾಟಕದ ಬಗೆಗೆ ತಳೆದ ಧೋರಣೆಯನ್ನು ಕಂಡು ಮೈಸೂರಿನ ಜನತೆ ಕ್ಷೋಭೆಗೊಂಡಿದೆ. 'ಸಮರ ಸನ್ನದ್ಧರಾಗಿರಿ' ಎಂಬ ಕಾಳಗದ ಕಹಳೆಯನ್ನು ಸರ್ವಪಕ್ಷ ಪರಿಷತ್ತಿನ ಯುವಕ ಪರಿಷತ್ತು ಊದಿತು. ಶೀಘ್ರದಲ್ಲಿ ಕರ್ನಾಟಕ ಪ್ರಾಂತ ನಿರ್ಮಾಣವಾಗದೆ ಹೋದಲ್ಲಿ ಮೈಸೂರು ಸಂಸ್ಥಾನ ಕಾಂಗ್ರೆಸ್ಸಿನಲ್ಲಿ ಇಬ್ಭಾಗವಾಗಬಹುದೆಂಬ ಹೆದರಿಕೆಯನ್ನು ಉಗ್ರಗಾಮಿಗಳು ಹಾಕಿದರು. ಇನ್ನು ಕೆಲವು ಉಗ್ರಗಾಮಿಗಳು ಇದಕ್ಕೂ ಮುಂದೆ ಹೋಗಿ 'ಮಹಾರಾಜರನ್ನು ಮನೆಗೆ ಕಳಿಸಿರಿ. ಅವರೇ ನವಕರ್ನಾಟಕದ ಅಸ್ತಿತ್ವಕ್ಕೆ ಅಡ್ಡಗಾಲು ಹಾಕುತ್ತಿದ್ದಾರೆ' ಎಂದೂ ಹೇಳಿದರು.

ನಮ್ಮ ರಾಜಕಾರಣಿಗಳು ಅರ್ಥಮಾಡಿಕೊಳ್ಳಲಿ. ಕೊಲ್ಹಾಪುರ ಬಡೋದೆಗಳಿಗೆ ಏನಾಯಿತೆಂಬುದನ್ನು ಅವರು ನೋಡಲಿ. ಇತಿಹಾಸಕಾರ ಕೂಗಿ ಕೂಗಿ ಹೇಳುತ್ತಿದ್ದಾನೆ: ಇತಿಹಾಸದ ಪುನರಾವೃತ್ತಿಯಾಗಲಿದೆ !

# ಉಪಾಧ್ಯಕ್ಷರೊಡನೆ

ಆಂಧ್ರ ಪ್ರಾಂತ ರಚನೆಯ ತೀರ್ಮಾನದ ಪ್ರಶ್ನೆ ಬಂದಾಗಲೇ ಕರ್ನಾಟಕವು ಎದ್ದು ಕುಳಿತಿತು. ಕನ್ನಡಿಗರು ಮೈ ತುಂಬ ಕಣ್ಣು ಮಾಡಿಕೊಂಡು ಪರಿಸ್ಥಿತಿಯ ಅವಲೋಕನಕ್ಕೆ ಸುರುವು ಮಾಡಿದರು. ಅವರಿಗೆ ಈ ಸಮಯದಲ್ಲಿ ಎಚ್ಚರದಿಂದ ಇರುವುದೂ ನ್ಯಾಯವಾಗಿದ್ದಿತು. ಹೊಸ ಪ್ರಾಂತದ ನಿರ್ಮಾಣದ ಕಾಲದಲ್ಲಿ ಕನ್ನಡದ ಗಡಿ ಕೋಟೆಗಳು ಕೈ ತಪ್ಪಬಹುದೆಂಬ ಅಂಜಿಕೆ ಅವರಿಗೆ ಸಹಜವಾಗಿಯೇ ಇದ್ದಿತು. ಎಂತಲೇ ಕನ್ನಡಿಗರು ಸಿಡಿದೆದ್ದರು, ಜಾಗರೂಕರಾದರು, ಕಾರ್ಯೋನ್ಮುಖಿಗಳಾದರು.

ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಉಪಾಧ್ಯಕ್ಷರು ಅವರು. ತಿ. ರು. ನೆಸ್ವಿ ಅವರ ಹೆಸರು. ಕನ್ನಡ ಪ್ರಾಂತ ರಚನೆಗಾಗಿ ದಿವಾರಾತ್ರಿ ಹೋರಾಡುವ ನೇತಾರರಲ್ಲಿ ಅವರೂ ಒಬ್ಬರು. ಅವರನ್ನು ಕಂಡು ಕನ್ನಡ ನಾಡಿನ ಏಕೀಕರಣ ಬಗೆಗೆ ಚರ್ಚಿಸಬೇಕೆಂದು ಬಯಸಿದೆ. ಶ್ರೀಯುತರನ್ನು ಮುಂಬಯಿಯಲ್ಲಿ ಸಂದರ್ಶಿಸಿದೆ. ಅವರ ಮಾತು ತಿಳಿ. ಅವರ ವಿಚಾರ ನಿರ್ಮಲ.

ಪ್ರ:—ಹುಬ್ಬಳ್ಳಿಯಲ್ಲಿ ಇಷ್ಟು ಅವಸರದಿಂದ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಭೆಯು ಏಕೆ ಕೂಡಿತು?

ಉ:—ಅಖಿಲ ಭಾರತ ಕಾಂಗ್ರೆಸ್ ಕಾರ್ಯವಾಹಕ ಮಂಡಲವು 'ಆಂಧ್ರ ಪ್ರಾಂತ ರಚನೆಯೊಂದೇ ಸಮೀಪದಲ್ಲಿ ಸಾಧ್ಯವೆ'ಂದು ಹೇಳಿದಾಗ ಕನ್ನಡಿಗರ ಮನಸ್ಸು ತಲ್ಲಣಗೊಂಡಿತು. ಕಾರ್ಯವಾಹಕ ಮಂಡಲಿಯವರ ತೀರ್ಮಾನಿನ ಬೆಳಕಿನಲ್ಲಿ ಸದ್ಯದ ಪರಿಸ್ಥಿತಿಯನ್ನು ಚರ್ಚಿಸುವದಕ್ಕೆ ಪ್ರಾಂತಿಕ ಕಾಂಗ್ರೆಸ್ ಸಮಿತಿಯು ತನ್ನ ಕಾರ್ಯವಾಹಕ ಮಂಡಲಿಯ ಅವಸರದ ಸಭೆಯನ್ನು ಕರೆಯುವುದು ಆವಶ್ಯಕವೆಂದೇ ಅನ್ನಿಸಿತು. ೧೯೧೭ ನೆಯ ಇಸವಿಯಿಂದ ಕರ್ನಾಟಕವು ಪ್ರಾಂತ ರಚನೆಗಾಗಿ ಒಂದೇ ಸವನೆ ಬೇಡುತ್ತ ಬಂದುದು ಎಲ್ಲಿಯೋ ಹೋಯಿತು. ಈಗ ಒಮ್ಮಿಂದೊಮ್ಮೆ ಆಂಧ್ರದ ಪ್ರಶ್ನೆ ಬಂದು ಬಿಟ್ಟಿತು. ಎಂದ ಮೇಲೆ....?

ಪ್ರ:—ಆಂಧ್ರ ಪ್ರಾಂತಕ್ಕೂ ಕರ್ನಾಟಕ ಪ್ರಾಂತಕ್ಕೂ ಏನು ಸಂಬಂಧ ಹಚ್ಚುತ್ತಿದ್ದೀರಿ ನೀವು?

ಉ:—ಅವರಿಗೆ ಒಳ್ಳೆಯದಾಗುವುದಾದರೆ ಇವರಿಗೂ ಆಗಲಿ. ಆಂಧ್ರವು ಪ್ರತ್ಯೇಕ ಪ್ರಾಂತವಾಗುವುದಾದರೆ ಕರ್ನಾಟಕ ಏಕೆ ಆಗಬಾರದು. ಆಂಧ್ರ ಪ್ರಾಂತ ರಚನೆಯು ಕನ್ನಡಿಗರ ಮನಸ್ಸನ್ನು ಕೆರಳಿಸಿದುದಕ್ಕೆ ಹಲವಾರು ಕಾರಣಗಳಿವೆ. ಮೊದಲನೆಯದಾಗಿ ಗಡಿ ಪ್ರಶ್ನೆಯ ಸಮಸ್ಯೆ. ಕರ್ನಾಟಕ ಮತ್ತು ಆಂದ್ರ ದೇಶದ ಗಡಿಗಳು ಕೂಡಿಕೊಂಡಿವೆ. ಅಲ್ಲದೆ ವಿವಾದಾಸ್ಪದ ವಾದ ಪ್ರದೇಶಗಳು ಈ ಗಡಿಯಂಚಿನಲ್ಲಿವೆ. ಈ ಪ್ರದೇಶವನ್ನೆಲ್ಲ ನಿರ್ವಿವಾದವಾಗಿ ನುಂಗಬೇಕೆಂದು ಆಂಧ್ರರ ಆಸೆಯಾಗಿದೆ.

ಎರಡನೆಯದಾಗಿ ಕರ್ನಾಟಕಾಂಧ್ರ ಚಳವಳಿಗಳು ಒಂದೇ ಕಾಲಕ್ಕೆ ಪ್ರಾರಂಭವಾದವು. ಮೂರನೆಯದಾಗಿ ಆಂಧ್ರಕ್ಕಿಂತಲೂ ಕರ್ನಾಟಕ ಪ್ರಾಂತ ರಚನೆಯ ಪ್ರಶ್ನೆ ತೀರ ಅಗತ್ಯವಾದುದಾಗಿದೆ. ಕನ್ನಡ ನಾಡು ಅನೇಕ ಆಡಳಿತಕ್ಕೆ ಸಿಲುಕಿ ಹರಿದು ಹಂಚಿ ಹೋಗಿದೆ. ಇದರಿಂದಾಗಿ ಕನ್ನಡಿಗರ ಪ್ರಗತಿ ನಿಂತ ನೀರಿನಂತಾಗಿದೆ. ಮುಂಬೈ, ಮದರಾಸು, ಕೊಡಗಿನಲ್ಲೂ, ಹೈದರಾಬಾದ ಮತ್ತು ಮೈಸೂರು ಸಂಸ್ಥಾನಗಳಲ್ಲೂ ಕನ್ನಡ ನಾಡು ಸಿಕ್ಕಿಕೊಂಡಿದೆ. ಮೈಸೂರು ಮತ್ತು ಕೊಡಗುಗಳನ್ನುಳಿದರೆ ಇನ್ನುಳಿದ ಪ್ರದೇಶದಲ್ಲಿ ಕನ್ನಡಿಗರು ಅಲ್ಪ ಸಂಖ್ಯಾಕರಾಗಿದ್ದಾರೆ. ಇದರ ಪರಿಣಾಮವೆಂದರೆ ನಾವು ರಾಜಕೀಯದಲ್ಲೂ, ಸಾಮಾಜಿಕ ಆರ್ಥಿಕ ರಂಗದಲ್ಲಿಯೂ ಬಹಳ ಹಿಂದುಳಿದಿದ್ದೇವೆ. ಧಾರ ಸಮಿತಿಯೂ ಇದನ್ನು ಮನಃಪೂರ್ವಕವಾಗಿ ಒಪ್ಪಿಕೊಂಡಿದೆ.

ಪ್ರ:—ಭಾಷಾವಾರ ಪ್ರಾಂತ ರಚನೆಯ ಬಗೆಗೆ ಧಾರ ಸಮಿತಿ ಏನು ಅಭಿಪ್ರಾಯ ಕೊಟ್ಟಿತು? ಕರ್ನಾಟಕ ಪ್ರಾಂತ ನಿರ್ಮಾಣದ ಬಗೆಗೆ ಅದು ಏನಾದರೂ ವಿಚಾರ ವ್ಯಕ್ತ ಪಡಿಸಿತೇ?

ಉ:—ಹಿಂದುಸ್ತಾನ ಸರಕಾರದಿಂದ ನಿಯೋಜಿತವಾದ ಧಾರ ಸಮಿತಿಯು ಭಾಷಾವಾರ ತಳಹದಿಯ ಮೇಲೆ ಪ್ರಾಂತಗಳನ್ನು ರಚಿಸಬೇಕೆಂಬ ತತ್ವವನ್ನೇ ಅನಿಯಮಿತ ಕಾಲದವರೆಗೆ ಮುಂದಳ್ಳಬೇಕೆಂದು ಹೇಳಿತು. ತುಂಡು ತುಂಡಾದ ಕರ್ನಾಟಕ ಮತ್ತು ಕೇರಳ ಪ್ರಾಂತಗಳು ಆಡಳಿ

ತದ ದೃಷ್ಟಿಯಿಂದ ಬಹಳ ಹಾನಿಗೀಡಾಗಿದೆಯೆಂಬುದಾಗಿ ಸಮಿತಿಯು ಹೇಳಿಕೆಯನ್ನು ಕೊಡುತ್ತ ಒಂದು ವೇಳೆ ಈ ಪ್ರಾಂತಗಳಿಗೆ ತಮ್ಮ ಮನೆಯ ಹತ್ತಿರವೇ ಸರಕಾರವನ್ನು ಕಟ್ಟಿಕೊಳ್ಳಲು ಅವಕಾಶವನ್ನಿತ್ತರೆ ಅವು ಗಮನಾರ್ಹವಾದ ಪ್ರಗತಿಯನ್ನು ಸಾಧಿಸಬಲ್ಲವೆಂದು ಅಭಿಪ್ರಾಯವನ್ನಿತ್ತಿತು.

ಪ್ರ:—ಕರ್ನಾಟಕದ ರಾಜೀನಾಮೆಗಳನ್ನುದ್ದೇಶಿಸಿ ಮಾತನಾಡುತ್ತ ಮುಖ್ಯ ಪ್ರಧಾನಿಗಳು ಹಿಂದುಸ್ತಾನ ಸರಕಾರವು ಸದ್ಯಕ್ಕೆ ಭಾಷಾವಾರ ಪ್ರಾಂತ ನಿರ್ಮಾಣದ ಸಮಸ್ಯೆಯನ್ನು ಎತ್ತಿಕೊಳ್ಳುತ್ತವೇ ಇಲ್ಲವೆಂದು ಪತ್ರಿಕಾ ಪ್ರತಿನಿಧಿಗಳಿಗೆ ಹೇಳಿದರು. ಒಂದು ವೇಳೆ ಪ್ರಾಂತರಚನೆಯನ್ನು ಯೋಚಿಸುವದೇ ಆದಲ್ಲಿ ಪ್ರಾಂತ್ಯಕ್ಕಾಗಿ ಹೋರಾಡುವವರೆಲ್ಲ ವಿವಾದಾಸ್ಪದ ಸಂಗತಿಗಳ ಬಗೆಗೆ ಒಮ್ಮತವುಳ್ಳವರಾಗಿರಬೇಕೆಂದು ಪ್ರಧಾನಿಗಳು ಹೇಳಿದರು. 'ಜೆವಿಪಿ' ವರದಿಯ ಮೇರೆಗೆ ನೀವು ಒಮ್ಮತವುಳ್ಳವರಾಗಿರುವಿರೇನು? ಮೈಸೂರು ಕರ್ನಾಟಕದಲ್ಲಿ ಸಮಾವೇಶವಾಗುವದಕ್ಕೆ ಒಪ್ಪಿಕೊಂಡಿದ್ದರೆ ನೀವದನ್ನು ಸಿದ್ಧಮಾಡಿ ತೋರಿಸುವಿರಾ?

ಉ:—'ಜೆವಿಪಿ' ವರದಿಯನ್ವಯ ಕರ್ನಾಟಕವು ಎಲ್ಲ ಕರಾರುಗಳನ್ನೂ ತುಂಬಿಕೊಟ್ಟಿದೆ. ಮೈಸೂರು ಸಮೀಕರಣ ಹೊಂದುವದಕ್ಕೆ ಒಪ್ಪಿಕೊಂಡಿದೆ. ಮೈಸೂರು ಮಂತ್ರಿಮಂಡಳ, ಸಂಸ್ಥಾನಿ ಕಾರ್ಯವಾಹಕ ಸಮಿತಿ, ಯುವಕ ಪರಿಷತ್ತು, ಸರ್ವ ಪಕ್ಷೀಯ ಪರಿಷತ್ತು ಎಲ್ಲವೂ ಮಹಾರಾಜರನ್ನು ಘಟನಾತ್ಮಕ ಅಧಿಪತಿಗಳನ್ನಾಗಿಟ್ಟುಕೊಂಡು ಸಂಯುಕ್ತ ಕರ್ನಾಟಕ ಪ್ರಾಂತ ನಿರ್ಮಾಣವನ್ನು ಒಪ್ಪಿ ಕೊಂಡಿವೆ. ಮೈಸೂರು ಮತ್ತು ಕರ್ನಾಟಕ ಜನತೆಯೆಲ್ಲ ಒಕ್ಕೊರಲಿನಿಂದ ಕರ್ನಾಟಕ ಪ್ರಾಂತ ರಚನೆಯನ್ನು ಪ್ರತಿಪಾದಿಸುತ್ತಿರುವ ಸಮಯದಲ್ಲಿ ಯಾರು ಅದನ್ನು ವಿರೋಧಿಸಿಯಾರು? ಇದು ಒಮ್ಮತವುಳ್ಳ ಅಭಿಪ್ರಾಯವಲ್ಲವೇನು?

ಪ್ರ:—ಮೈಸೂರಿನ ಕೆಲವು ಜನ ತಮ್ಮ ಮಹಾರಾಜರು ಸಂಯುಕ್ತ ಕರ್ನಾಟಕದ ರಾಜಪ್ರಮುಖರಾಗಬೇಕೆಂದು ಅಭಿಪ್ರಾಯ ಪಡುತ್ತಿದ್ದಾರಂತೆ. ಅದು ನಿಜವೇ?

ಉ:—ವೈಯುಕ್ತಿಕವಾಗಿ ಹೇಳಬೇಕಾದರೆ ಮಹಾರಾಜರು ರಾಜ ಪ್ರಮುಖರಾಗುವದನ್ನಾಗಲಿ, ಘಟನಾತ್ಮಕ ಪ್ರಭುಗಳಾಗುವದನ್ನಾಗಲಿ ನಾನು ವಿರೋ

ಧಿಸುತ್ತೇನೆ. ಕನ್ನಡ ನಾಡಿನ ಏಳ್ಗೆಯನ್ನು ಬಯಸಿ ಅವರು ಸಿಂಹಾಸನ ತ್ಯಾಗವನ್ನು ಮಾಡಿ ಹೊರಟು ಹೋಗುವುದು ಬಹಳ ಒಳ್ಳೆಯದೆಂದು ನನಗೆ ಅನ್ನಿಸುತ್ತಿದೆ. ಆದರೆ ಜನತೆ ಬಯಸಿದರೆ ಅವರು ರಾಜ ಪ್ರಮುಖರಾಗಬಹುದು, ಇಲ್ಲವೆ ಒಕ್ಕೂಟ ಕರ್ನಾಟಕದ ಗವ್ಹರ್ನರರಾಗಬಹುದು.

ಪ್ರ:—ಆದರೆ ಮಹಾರಾಜರು ಹಿಂದೀ ಒಕ್ಕೂಟದಲ್ಲಿಯ ಕರ್ನಾಟಕ ಪ್ರಾಂತದ ರಾಜ ಪ್ರಮುಖರಾಗುವುದು ಹೇಗೆ ಸಾಧ್ಯ?

ಉ:—ಸರದಾರ ಪಟೇಲರೇ ಹೇಳಿದ್ದಾರಲ್ಲ? ಪ್ರಾಂತ ರಚನೆಯ ದಾರಿಯಲ್ಲಿ ಮಹಾರಾಜರೆಂದಿಗೂ ಅಡ್ಡ ಬರಬಾರದು. ಅವರನ್ನು ಅಂತ ಪ್ರಾಂತದ ಘಟನಾತ್ಮಕ ಅಧಿಪತಿಗಳನ್ನಾಗಿ ಮಾಡಿಕೊಳ್ಳುವಲ್ಲಿಯೂ ಘಟನೆಯೂ ಅಡ್ಡ ಬರುವದಿಲ್ಲವೆಂದು ಹೇಳಿರುವರಲ್ಲ!

ಪ್ರ:—ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಮಿತಿಯ ತೀರ್ಮಾನವೇ ಕನ್ನಡಿಗರ ಸಮರ ಭೇರಿಯ ಅರ್ಥವೇ?

ಉ:—ಹೌದು, ಒಂದು ದೃಷ್ಟಿಯಿಂದ ಅದು ನಿಜವೇ. ಕಾಂಗ್ರೆಸ್ ಅಧಿಕಾರ ವರ್ಗದವರ ಧೋರಣೆಯನ್ನು ಕುರಿತಾದ ನಮ್ಮ ಗೊತ್ತುವಳಿ ಬರೀ ಔಪಚಾರಿಕ ಗೊತ್ತುವಳಿಯೆಂದು ತಿಳಿಯುವುದು ತಪ್ಪು. ೧೯೧೭ ರಿಂದ ನಾವು ಹೋರಾಡುತ್ತ ಬಂದಿದ್ದೇವೆ. ಹಿಂದ ದೇಶದ ಬಿಡುಗಡೆಗಾಗಿ ಕರಣತ್ರಯದಿಂದ ನಾವು ಕಾದಾಡಿದ್ದೇವೆ. ಬಿಡುಗಡೆಯ ಈ ಹೋರಾಟದಲ್ಲಿ ಹೆಂಗಳೆಯರು ಜೀವಾರ್ಪಣ ಮಾಡಿದ್ದಾರೆ, ಮಕ್ಕಳು ಮರಿಗಳು ಆತ್ಮಾರ್ಪಣೆಯ ಬಲಿದಾನ ಮಾಡಿದ್ದಾರೆ. ಲೆಕ್ಕವಿಲ್ಲದಷ್ಟು ಜನ ಜೀವ ಕೊಟ್ಟಿದ್ದಾರೆ.

ಹಿಂದುಸ್ತಾನ ಬಂಧ ಮುಕ್ತವಾದರೆ ತಾವೂ ಸ್ವಾತಂತ್ರ್ಯದ ಗಾಳಿಯನ್ನು ಸೇವಿಸಬಹುದೆಂದು ಕನ್ನಡಿಗರು ನಂಬಿದ್ದರು. ಆದರೆ ದೇಶದ ದುರ್ದೈವ, ಅವರು ನಿರಾಶೆ ಹೊಂದಿದರು. ಅವರ ಮನಸ್ಸು ಕಳವಳಕ್ಕೀಡಾಯಿತು. ಅವರ ಉತ್ಸಾಹ ಉಡುಗಿ ಹೋಯಿತು. ಅವರಿಗೆ ಇನ್ನೊಂದೇ ಉಪಾಯ! ಸರಕಾರದ ಮೇಲೂ, ಕಾಂಗ್ರೆಸ್ಸಿನ ಅಧಿಕಾರ ವರ್ಗದ ಮೇಲೂ ಒತ್ತಾಯ ತರುವುದೊಂದೇ ಬಾಕಿ.

ಪ್ರ:—ಸರಕಾರವು ಸಂದು ಕಟ್ಟಿನಲ್ಲಿದೆ. ದೇಶ ಸಂಧಿಕಾಲದಲ್ಲಿದೆ.

ಇಂತ ಹೊತ್ತಿನಲ್ಲಿ ನೀವು ಈ ಸಮಸ್ಯೆಯನ್ನು ಮುಂದೊಡ್ಡಿ ಸರಕಾರವನ್ನು ಪೇಚಿಗೆ ಹಾಕಬಾರದು. ಇದಕ್ಕೆ ನೀವು ಏನು ಅನ್ನುತ್ತೀರಿ?

ಉ:—ಹಾಗಾದರೆ ಸರಕಾರ ಆಂಧ್ರದ ಪ್ರಶ್ನೆಯನ್ನೇ ಬಿಟ್ಟು ಬಿಡ ಬೇಕಾಗಿತ್ತು. ಆಂಧ್ರವಾದರೆ ಕರ್ನಾಟಕವೇಕೆ ಬೇಡ ಎಂದು ಜನತೆ ಪ್ರಶ್ನಿಸುತ್ತಿದ್ದರೆ ಇದೆಲ್ಲ ಸರಕಾರ ಮಾಡಿದ ತಪ್ಪೇ!

ಪ್ರ:—ಸರಕಾರದ ಮೇಲೆ ಒತ್ತಾಯ ಹೇಗದು ತರುತ್ತೀರಿ?

ಉ:— ಈ ವಿಷಯದಲ್ಲಿ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಮಿತಿ ನಿರ್ಧಾರಕ್ಕೆ ಬರುವುದು.

ಪ್ರ:—ಕಾಂಗ್ರೆಸ್ ವರ್ಕಿಂಗ ಕಮಿಟಿಯ ನಿರ್ಣಯವನ್ನು ವಿರೋಧಿಸುವದಕ್ಕೋಸುಗ ಕೇಂದ್ರ ಮತ್ತು ಪ್ರಾಂತಿಕ ಶಾಸನ ಸಭೆಗಳಿಂದ ಸದಸ್ಯರೆಲ್ಲ ರಾಜೀನಾಮೆ ಕೊಟ್ಟಿದ್ದು ನಿಜವೇ?

ಉ:--ಸತ್ಯದ ಮಾತೆಂದರೆ ಇನ್ನೂ ರಾಜೀನಾಮೆಗಳು ಹೋಗಿಲ್ಲ. ಕೇಂದ್ರದ ಪಾರ್ಲಿಮೆಂಟರಿ ಬೋರ್ಡಿಗೆ ರಾಜೀನಾಮೆ ಸಲ್ಲಿಸುವುದಕ್ಕೆ ಅಪ್ಪಣೆ ಬೇಡವಾಗಿದೆ. ಕೊಡುವುದು ಬಿಡುವುದು ಬೋರ್ಡಿನವರ ಕೈಯಲ್ಲಿದೆ.

ಪ್ರ:—ಒಂದು ವೇಳೆ ಬೋರ್ಡು ಒಪ್ಪದೇ ಹೋದರೆ ಅಥವಾ ಒಪ್ಪಿದರೆ ನೀವೇನು ಮಾಡುತ್ತೀರಿ?

ಉ:—ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯು ಏನಾದರೊಂದು ನಿರ್ಧಾರಕ್ಕೆ ಈ ವಿಷಯದಲ್ಲಿ ಬರುವದು.

ಪ್ರ:—ಹೈಕಮಾಂಡದ ಮತ್ತು ಕೇಂದ್ರ ಪಾರ್ಲಿಮೆಂಟರಿ ಬೋರ್ಡಿನವರ ತೀರ್ಮಾನನ್ನು ಕ. ಪ್ರಾ. ಕಾಂಗ್ರೆಸ್ಸು ತೇಲಿಬಿಡುವುದೇನು ?

ಉ:—ಕ. ಪ್ರಾ. ಕಾಂಗ್ರೆಸ್ಸು ಸಮಿತಿ ಕನ್ನಡಿಗರ ಕೂಗನ್ನು ಪ್ರತಿಧ್ವನಿಸುವದು. ನಿಜವಾದ ಮಾತನ್ನು ಹೇಳುತ್ತಿದ್ದೇನೆ, ಕನ್ನಡಿಗರ ಮನಸ್ಸಿಂದು ನೋವಿನಿಂದ ತುಂಬಿ ಹೋಗಿದೆ.

ಪ್ರ:—ಕರ್ನಾಟಕ ವಣಿಕ ಸಂಘವು ಸತ್ಯಾಗ್ರಹದ ಬೆದರಿಕೆ ಹಾಕಿದೆಯಂತೆ! ಸರಕಾರ ಕರ್ನಾಟಕ ಪ್ರಾಂತ ನಿರ್ಮಾಣದ ಪ್ರಶ್ನೆಯನ್ನು ಎತ್ತಿಕೊಳ್ಳದೇ ಹೋದಲ್ಲಿ ಚಳವಳಿ ಹೂಡುವುದೆಂದು ಹೇಳಲಾಗುತ್ತಿದೆ. ನಿಜವೇ?

ಉ:—ನಿಜ, ನಿಜ. ಸತ್ಯಾಗ್ರಹ ಸುರುವು ಮಾಡುವುದಕ್ಕಾಗಿ ಹತ್ತು ಲಕ್ಷ ರೂಪಾಯಿ ಕೂಡಿಸಲು ವಣಿಕ ಸಂಘ ನಿರ್ಧರಿಸಿದೆ. ವಣಿಕ ಸಂಘ ಪ್ರಭಾವಶಾಲಿಯಾದ ಸಂಸ್ಥೆ. ಅದು ನಿರಾಯಾಸವಾಗಿ ಹತ್ತು ಲಕ್ಷ ಕೂಡಿಸೀತು.

ಪ್ರ:—ಇವತ್ತು ಕರ್ನಾಟಕ ಪ್ರಾಂತವಾಗುವುದಾದರೆ ಕನ್ನಡ ನಾಡು ಸ್ವಾವಲಂಬನವಾಗಬಹುದೇ?

ಉ:—ಅದರಲ್ಲೇನು ಸಂದೇಹ ಬಂದೀತು? ಮೈಸೂರಿನ ಆಡಳಿತ ವರ್ಗ ಉತ್ತಮ ತರಗತಿಯದಿರುವುದೆಂಬುದು ಯಾರಿಗೆ ಗೊತ್ತಿಲ್ಲ? ನಾವು ಅದನ್ನು ಉಪಯೋಗಿಸಿಕೊಳ್ಳುತ್ತೇವೆ. ಮೈಸೂರಿನ ಸಿವ್ಹಿಲ್ ಸರ್ವೀಸು ಹಿಂದೀ ಒಕ್ಕೂಟದಷ್ಟೇ ಶ್ರೇಷ್ಠವಿದೆ. ಒಂದು ದೃಷ್ಟಿಯಲ್ಲಿ ಮೈಸೂರಿಗರು ಮುಂದೆ ಹೋಗಿದ್ದಾರೆ, ಇದಲ್ಲದೆ ಕನ್ನಡ ನಾಡಿನಲ್ಲಿಯೂ ಅನುಭವ ಹೊಂದಿದ ಆಡಳಿತಗಾರರಿದ್ದಾರೆ. ಸದ್ಯಕ್ಕೆ ಕರ್ನಾಟಕದ ಆಡಳಿತ ಕನ್ನಡಿಗರಿಂದಲೆ ಸುಗಮವಾಗಿಸಾಗಿದೆ. ಇಷ್ಟೆಲ್ಲ ಸಾಲದೇ ?

ಪ್ರ:— ಕೂಡಲೆ ಕರ್ನಾಟಕ ಪ್ರಾಂತವಾಗಬೇಕೆಂಬ ಅವಸರದ ಮಾತೇಕೆ ?

ಉ:— ಆಂಧ್ರದ ಜೊತೆಗೆ ಕರ್ನಾಟಕ ಪ್ರಾಂತವಾಗದೆ ಹೋದರೆ ಹಿಂದುಸ್ತಾನದ ನಕ್ಷೆಯಲ್ಲಿ ಇನ್ನೆಂದಿಗೂ ಸಂಯುಕ್ತ ಕರ್ನಾಟಕವು ಮೂಡಲಾರದು. ಗಡಿಯಂಚಿನಲ್ಲಿ ತೋಳಗಳು ಹಸಿದು ನಿಂತಿವೆ. ಕನ್ನಡದ ಗಡಿ ಪ್ರದೇಶಗಳನ್ನು ನುಂಗಿ ನೊಣೆಯಲು ಅವು ಸುಸಜ್ಜಿತವಾಗಿವೆ.

ಪ್ರ:— ಕೆಲವು ಮೈಸೂರಿಗರು ಸರದಾರ ಪಟೇಲರ ಮತ್ತು ನೆಹರೂರವರಲ್ಲಿ ಕರ್ನಾಟಕ ಪ್ರಾಂತರಚನೆಗಾಗಿ ಹೋರಾಟ ನಡಸಿರುವ "ಕೆಲವು ಬಂಡುಗಾರರನ್ನು" ಲಕ್ಷಕ್ಕೆ ತರದಿರಲು ಹೇಳಿರುವರಂತೆ! ಇದಕ್ಕೆ ನೀವೇನು ಹೇಳುತ್ತೀರಿ ?

ಉ:— ಅದು ಮಾತಿಗೆ ಬಾರದ ಗುಂಪು. ಅವರು ತಮ್ಮನ್ನೇ ತಾವು ಪ್ರತಿನಿಧಿಸುತ್ತಿದ್ದಾರೆ. ರಾಷ್ಟ್ರೀಯ ಕಾಂಗ್ರೆಸ್ಸಿನ ವಿರುದ್ಧ ಮೈಸೂರು ಸರಕಾರ ಎದ್ದು ನಿಂತಾಗ ಅವರು ಶಾಸನ ಸಭೆಗೆ ಆರಿಸಿ ಬಂದವರು. ಈಗ ಮೂಲೆ ಹಿಡಿದಿದ್ದಾರೆ. ಮೈಸೂರು ಮಂತ್ರಿಮಂಡಲವೇ ಕರ್ನಾಟಕ ಪ್ರಾಂತ

ನಿರ್ಮಾಣವನ್ನು ಒಪ್ಪಿಕೊಂಡ ಹೊತ್ತಿನಲ್ಲಿ ಕೆಲಸಕ್ಕೆ ಬಾರದ ಈ ಸ್ವಾರ್ಥ ಲಾಲಸಿಗಳನ್ನು ಯಾರು ಲೆಕ್ಕಕ್ಕೆ ತರುತ್ತಾರೆ ? ನಾವು ಬರೀ ಚಳುವಳಿಗಾರರಲ್ಲ. ಅಸಂಖ್ಯಾತ ಕನ್ನಡಿಗರ ಧ್ವನಿಯನ್ನು ನಾವು ಪ್ರತಿಧ್ವನಿಸುತ್ತಿದ್ದೇವೆ.

ಪ್ರ:— ಸಂಯುಕ್ತ ಕರ್ನಾಟಕದಲ್ಲಿ ಸಮಾವೇಶವಾಗುವ ಪ್ರದೇಶ ಎಷ್ಟೆಷ್ಟು ಹೇಳುವಿರಾ ?

ಉ:— ಒಕ್ಕೂಟ ಕರ್ನಾಟಕ, ಮೈಸೂರು ಮತ್ತು ಕೊಡಗು; ಹೈದರಾಬಾದು ಮತ್ತು ಮದರಾಸಿನ ಕೆಲಭಾಗ; ಅಲ್ಲದೆ ಮಹಾರಾಷ್ಟ್ರದ ಗಡಿಯಲ್ಲಿಯ ಕೆಲಪ್ರದೇಶ. ಇಷ್ಟೆಲ್ಲ ಕೂಡಿದರೆ ಕನ್ನಡಿಗರ ಸಂಖ್ಯೆ ಸುಮಾರು ಎರಡುವರೆ ಕೋಟಿ ಆದೀತು. ಕಂದಾಯ ಸುಮಾರು ೨೦ ಕೋಟಿ ಆದೀತು.

ಪ್ರ:— ಸಂಯುಕ್ತ ಕರ್ನಾಟಕದ ಯೋಜನೆಗೆ ಹೈದರಾಬಾದು, ಮದರಾಸು ಮತ್ತು ಮಹಾರಾಷ್ಟ್ರದ ಗಡಿಯಲ್ಲಿರುವ ಪ್ರದೇಶಗಳನ್ನು ತಂದು ಜೋಡಿಸುವುದು ಸುಲಭ ಸಾಧ್ಯವೇ ?

ಉ:— ಮೈಸೂರು ಮತ್ತು ಕೊಡಗು ನೂರಕ್ಕೆ ನೂರರಷ್ಟು ಕನ್ನಡ ಮಾತನಾಡುವ ಪ್ರದೇಶ. ಆದುದರಿಂದ ಅವುಗಳ ಬಗೆಗೆ ಏನೂ ತೊಂದರೆಯಿಲ್ಲ. ಹೈದರಾಬಾದನ್ನು ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರಗಳ ನಡುವೆ ಹಂಚಬೇಕು. ಮದರಾಸು ಮತ್ತು ಮಹಾರಾಷ್ಟ್ರದ ಗಡಿ ಪ್ರದೇಶವನ್ನು ಸೀಮಾ ನಿರ್ಣಯ ಸಮಿತಿಯವರ ಮೂಲಕ ಬಗೆಹರಿಸಿಕೊಳ್ಳಬೇಕು

ಪ್ರ:— ಮದರಾಸ ಸರಕಾರವು ಆಂಧ್ರ ಪ್ರಾಂತದ ಗಡಿನಿರ್ಣಯದ ಬಗ್ಗೆ ಸೀಮಾ ಸಮಿತಿಯನ್ನು ನಿಯಮಿಸಿದೆ. ಅದರಲ್ಲಿ ಪ್ರಾತಿನಿಧ್ಯ ಕೊಡಬೇಕೆಂದು ನೀವು ಚಳವಳಿ ಏಕೆ ಎಬ್ಬಿಸಿದ್ದೀರಿ ?

ಉ:— ಮದರಾಸು ಪ್ರಾಂತದಲ್ಲಿರುವ ಬಳ್ಳಾರಿ ಅನಂತಪುರ, ಕೋಯಿಮುತ್ತೂರುಗಳು ವಿವಾದಾಸ್ಪದ ಪ್ರದೇಶಗಳಾಗಿವೆ. ಆಂಧ್ರವು ಇವನ್ನು ನುಂಗಲು ಹೊಂಚು ಹಾಕಿದೆ. ವಿಭಜನಾ ಸಮಿತಿಯಲ್ಲಿ ಕನ್ನಡಿಗರ ಪ್ರತಿನಿಧಿಯಿದ್ದರೆ ಅವನಿಗೆ ಹೊಂಚುಸಂಚುಗಳ ಮೇಲೆ ಕಣ್ಣಿಡಲಿಕ್ಕೆ ಸಾಧ್ಯವಾಗುತ್ತದೆ.

ಪ್ರ:— ಕರ್ನಾಟಕದ ರಾಜಧಾನಿ ಯಾವುದು ಆದೀತು? ಅದರ ಸೆಕ್ರೆಟರಿಯೇಟ ಎಲ್ಲಿ?

ಉ:— ಬೆಂಗಳೂರೇ ಕರ್ನಾಟಕ ರಾಜಧಾನಿ ಆದೀತು. ಅಲ್ಲಿರುವ ಮೈಸೂರು ಸರಕಾರದ ಸೆಕ್ರೆಟರಿಯೇಟು ಕರ್ನಾಟಕ ಸೆಕ್ರೆಟರಿಯೇಟ್ ಆದೀತು.

ಪ್ರ:— ಕರ್ನಾಟಕ ಪ್ರತ್ಯೇಕ ಪ್ರಾಂತವಾದರೆ ಮುಂಬೈ ಸರಕಾರದ ಆರ್ಥಿಕ ಪರಿಸ್ಥಿತಿಗೆ ಏನಾದರೂ ಧಕ್ಕೆ ಬಂದೀತೇನು?

ಉ:— ಆದರಿಂದ ಅಂತಹದೇನೂ ಪರಿಸ್ಥಿತಿ ಬಂದೀತೆಂದು ನಾನು ಯೋಚಿಸಲಾರೆ.

ತಾಸು ಹೊತ್ತಿನವರೆಗೆ ನಾವು ಚರ್ಚಿಸಿದೆವು. ಉಪಾಧ್ಯಕ್ಷರು ಕನ್ನಡಿಗರ ಜೀವಜೀವಾಳದ ಏಕೀಕರಣದ ಸಮಸ್ಯೆಯನ್ನು ಕೂಲಂಕಷವಾಗಿ ಅಭ್ಯಾಸ ಮಾಡಿದ್ದರ ಪರಿಣಾಮು ನನ್ನ ಮೇಲೆ ಸಾಕಷ್ಟು ಆಯಿತು. ಅವರಂದಂತೆ ಪ್ರತ್ಯೇಕ ಕನ್ನಡ ಪ್ರಾಂತವೇ ಕನ್ನಡಿಗರ ಜೀವ, ಉಸಿರು.

'ಬರುತ್ತೇನೆ ನಮುಸ್ಕಾರ' ಎಂದೆ.

'ನಮುಸ್ಕಾರ'

---

# ವಜ್ರಾಘಾತ !

ಸಂಯುಕ್ತ ಕರ್ನಾಟಕ ಪ್ರಾಂತ ನಿರ್ಮಾಣದ ಪ್ರಶ್ನೆಯಮೇಲೆ ಕಾಂಗ್ರೆಸ್ ಕಾರ್ಯವಾಹಕ ಮಂಡಲಿಯು ತನ್ನ ತೀರ್ಪನ್ನು ಕೊಟ್ಟಿತು: ದೀರ್ಘ ಕಾಲಾವಧಿಯವರೆಗೆ ಕರ್ನಾಟಕ ಪ್ರಾಂತ ನಿರ್ಮಾಣವಿಲ್ಲ! ಒಕ್ಕೂಟ ಕರ್ನಾಟಕ ಮತ್ತು ಮೈಸೂರಿನ ಕನ್ನಡಿಗರಿಗೆಲ್ಲ ಈ ನಿರ್ಣಯ ವಜ್ರಾಘಾತವಾದಂತಾಯಿತು.

ಇಂತ ಅನ್ಯಾಯದ ನಿರ್ಣಯದ ಆಗಮನವನ್ನು ಕನ್ನಡದ ಜನತೆ ಕನಸುಮನಸಿನಲ್ಲಿಯೂ ನಂಬಿರಲಿಲ್ಲ ಆಗಿ ಹೋಯಿತು. ಇನ್ನು ಮುಂದೇನು? ಕ. ಪ್ರಾ. ಕಾಂಗ್ರೆಸ್ಸು ಇನ್ನೇನು ಮಾಡುವದೆಂದು ಜನತೆ ಒಂದೇ ಸವನೆ ಕುತೂಹಲ ದೃಷ್ಟಿಯಿಂದ ಅತ್ತಕಡೆ ನೋಡುತ್ತಲಿದ್ದಾರೆ. ಅದು ಹೈ ಕಮಾಂಡಿನ ವಿರುದ್ಧ ತೋಳು ಏರಿಸಿ ನಿಲ್ಲುವುದೇ? ಅಥವಾ ಬಂದದ್ದನ್ನು ಪಂಚಾಮೃತವೆಂದು ಸ್ವೀಕರಿಸುವದೇ? ಇದರಲ್ಲಿ ಯಾವುದಾದರೂ ಒಂದು ನಿರ್ಣಯಕ್ಕೆ ಅದು ಬಂದಂದು ಕನ್ನಡಿಗರು ಅದನ್ನು ಹೇಗೆ ಬರಮಾಡಿ ಕೊಳ್ಳುತ್ತಾರೆ? ಇಲ್ಲಿ ನಾವು ತುಸು ವಿಚಾರ ಪರರಾಗಿ ಸುತ್ತಣ ಪರಿಸ್ಥಿತಿಯನ್ನಷ್ಟು ಸಿಂಹಾವಲೋಕನಕ್ರಮದಿಂದ ಗಮನಿಸೋಣ!

ಕ. ಪ್ರಾ. ಕಾಂಗ್ರೆಸ್ಸಿಗೆ ಮೇಲಿನವರಿಂದ ಮೇಲಕ್ಕೇಳದಂತಹ ಹೊಡತ ಬಿದ್ದಿತೆಂದು ನಂಬುವವರ ಪಕ್ಷ ಒಂದುಕಡೆ. ಇನ್ನು ಕಾಂಗ್ರೆಸ್ಸಿಗರು ಪುನಃ ಶಕ್ತಿ ಸಾಮರ್ಥ್ಯಗಳನ್ನು ಸಂಚಯಿಸಿಕೊಂಡು ಹೊಸ ಯುದ್ಧಕ್ಕೆ ಮತ್ತೆ ಇದಿರಾಗಿ ನಿಲ್ಲಲಾರರು. ಕ. ಪ್ರಾ. ಕಾಂಗ್ರೆಸ್ಸಿಗೆ ಉಭಯ ಸಂಕಟ; ಅತ್ತ ದರಿ, ಇತ್ತ ಪುಲಿ.

ಅವರು ಮುಂದಿಟ್ಟ ಹೆಜ್ಜೆ ಹಿಂದಕ್ಕಿಟ್ಟರೆ ರಾಜಕೀಯ ಆತ್ಮಹತ್ಯ ಮಾಡಿಕೊಂಡತೆಯೇ ಸರಿ. ಆಗ ಜನತೆ ಅವರ ದಾರಿ ಬಿಡುತ್ತಾರೆ. ಒಂದು ವೇಳೆ ಅವರು ಮೇಲಿನವರ ನಿರ್ಣಯವನ್ನು ವಿರೋಧಿಸಿ ನಿಂತರೆ ಕ. ಪ್ರಾ. ಕಾಂಗ್ರೆಸ್ಸು ಕಣ್ಮರೆಯಾಗಿಬಿಡುತ್ತದೆ; ಕರ್ನಾಟಕದಲ್ಲಿ ಕಾಂಗ್ರೆಸ್ಸಿನ ಗೋರಿ ಸಿದ್ಧವಾಗುತ್ತಿದೆ.

ಆದರೆ ಆ ತೀರ್ಪು ಕಠೋರ! ಹೇಳುವ ರೀತಿ ವಕ್ರ; ಸ್ವಾಭಿಮಾನವನ್ನು ಕೆಣಕುವಂತಹದು. ಸಾಮಾನ್ಯ ಕನ್ನಡಿಗನ ಮನಸ್ಸನ್ನು ಕದಲಿಸುವ ಧ್ವನಿ ಅದರಲ್ಲಿರುವದು ದುರ್ದೈವದ ಸಂಗತಿ. ಲಕ್ಷೋಪ ಲಕ್ಷ ಜನತೆಯ ಆಸೆ ಆಕಾಂಕ್ಷೆಗಳನ್ನು ಅಷ್ಟು ನಿರಾಯಾಸವಾಗಿ ಕಡೆಗಣಿಸಿ ನೋಡುವುದೇ ?

ಕರ್ನಾಟಕ ಪ್ರಾಂತ ನಿರ್ಮಾಣದ ಪ್ರಶ್ನೆಗೇ ಅರೆಹಾಳ ಬಡೆದು ಕೂಡಿಸುವ ಕಾಂಗ್ರೆಸ್ಸಿನ ಮನೋನಿಶ್ಚಯವನ್ನು ಹೊರಗಿನವರು ಸುಲಭವಾಗಿ ಗುರುತಿಸುವದರ ಜೊತೆಗೆ ಸಂಯುಕ್ತ ಕರ್ನಾಟಕದ ರಚನೆಯನ್ನು ವಿರೋಧಿಸುವ ಮೈಸೂರಿನ ಕೆಲವೊಂದು ವಿಶಿಷ್ಟ ವರ್ಗವನ್ನು ಎತ್ತಿ ಹಿಡಿಯುವ ದುರತಿಕ್ರಮವಾದ ಪ್ರಭಾವವನ್ನೂ ಕಾಣಬಹುದಾಗಿದೆ!

ಇದರ ಪರಿಣಾಮ ಮೈಸೂರಿನ ಮೇಲೆಯೂ ಆಗದೆ ಇರದು. ಸಂಯುಕ್ತ ಕರ್ನಾಟಕದ ನಿರ್ಮಾಣಕ್ಕಾಗಿ ಹಂಬಲಿಸಿ ಬಹಳ ಕಾಲದಿಂದ ಹಂಬಲಿಸಿದ ಕನ್ನಡಿಗರಿಗೆ ಮೈಸೂರಿನಲ್ಲಿ ಕೊರತೆಯೇನಿಲ್ಲ. ಅವರ ಮೇಲೆ ಈ ದುರ್ದೈವೀ ನಿರ್ಣಯ ಪರಿಣಾಮ ಮಾಡದೆ ಇದ್ದೀತೆ? ಕಾಂಗ್ರೆಸ್ ಅಧಿಕಾರಿ ವರ್ಗ ಕೈಕೊಂಡ ಈ ನಿರ್ಣಯದಿಂದಾಗಿ ಪ್ರಪಂಚದ ಕಣ್ಣಿನಲ್ಲಿ ನಿಷ್ಠಾವಂತ ಕನ್ನಡಿಗರ ಕಾಂಗ್ರೆಸ್ ಪ್ರೇಮವು ಕಲಂಕಿತವಾಗಿ ಹೋಯಿತು. ಕರ್ನಾಟಕದಲ್ಲಿ ಕಾಂಗ್ರೆಸ್ಸು ಕುಸಿಯಬಾರದು. ಚುನಾವಣೆಗಳಲ್ಲಿ ಕಾಂಗ್ರೆಸ್ಸು ಹಿಂದೆ ಬೀಳಬಾರದು. ಹೀಗೆ ಬಯಸಿದ ಕ. ಪ್ರಾ. ಕಾಂಗ್ರೆಸ್ಸು ರಾಜೀನಾಮೆ ಕೊಡಲು ಬಯಸಿತು. ತಮ್ಮ ಪ್ರತಿನಿಧಿಗಳು ಅಂತ ನಿರ್ಣಾಯಕ ಗೊತ್ತುವಳಿ ಸ್ವೀಕರಿಸಬೇಕೆಂದು ಜನತೆ ಅಪೇಕ್ಷಿಸಿತು. ಅಂತ ತ್ಯಾಗಕ್ಕೆ ಕಾಂಗ್ರೆಸ್ಸಿಗರು ಮನಸ್ಸು ಮಾಡಬೇಕೆಂದು ಕನ್ನಡದ ಜನಾಂಗ ಏಕ ಕೊರಲಿನಿಂದ ಕೇಳಿಕೊಂಡಿತು.

ಕಾಂಗ್ರೆಸ್ ವರ್ಕಿಂಗ ಕಮಿಟಿಯ ನಿರ್ಣಯವು ಭಾಷಾವಾರ ಪ್ರಾಂತ ರಚನೆಯನ್ನು ಒಪ್ಪಿಕೊಂಡಿದೆ. ಅದೇ ಕಾಲಕ್ಕೆ ಅದು ಒಂದು ಕರಾರನ್ನು ಹಾಕಿದೆ. ಕರ್ನಾಟಕ ಪ್ರಾಂತರಚನೆಯಾಗುವ ಮುನ್ನ ಜೆ. ವಿ. ಪಿ. ವರದಿಯನ್ವಯ ಎಲ್ಲ ಕರಾರುಗಳೂ ಪಾಲಿಸಲ್ಪಡಬೇಕು; ಒಕ್ಕೂಟ ಕರ್ನಾಟಕದಲ್ಲಿ ಮೈಸೂರು ಲೀನೀಕರಣವಾಗಬೇಕು! ಲೀನೀಕರಣಕ್ಕೆ ಎರಡು ದಾರಿ: ಮಹಾರಾಜರು ಸ್ವತಃ ಕಾಯಿದೆ ಹೊರಡಿಸಿ ಲೀನೀಕರಣ

ವಾಯಿತೆಂದು ಸಾರುವುದೊಂದು, ಜನತೆಯ ಸಮ್ಮತಿಯೊಂದಿಗೆ ಮಹಾರಾಜರು ಸಿಂಹಾಸನ ತ್ಯಾಗ ಮಾಡುವುದು ಇನ್ನೊಂದು ದಾರಿ.

ಅಧಿಕಾರ ವರ್ಗ ಮನಸ್ಸು ಮಾಡಿದರೆ ಸಂಸ್ಥಾನದ ಲೀನೀಕರಣಕ್ಕೆ ಮಹಾರಾಜರು ಒಪ್ಪುವುದು ತಡವಾಗಲಿಕ್ಕಿಲ್ಲ. ಅಂತ ಸಂದರ್ಭ ಬಂದ ಸಮಯದಲ್ಲಿ ಮಹಾರಾಜರ ಮನವೊಲಿಸುವುದಕ್ಕೆ ಜನರ ಸಮ್ಮತಿಯೇತಕ್ಕೆ ಬೇಕು? ಈ ಮಾತನ್ನು ಕಾಂಗ್ರೇಸ್ಸಿನ ಹೈ ಕಮಾಂಡು ಮುಂದಕ್ಕೆ ಚಾಚುತ್ತಿದೆಯೆನ್ನುವುದೇ ದುಃಖದ ಸಂಗತಿ. ಹಿಂದೀ ಒಕ್ಕೂಟದೊಂದಿಗೆ ಲೀನೀಕರಣವಾಗುವುದಕ್ಕೆ ಕಾಲಬಂದಾಗ ಕೊಲ್ಹಾಪೂರ ಮತ್ತು ಬಡೋದಾ ಸಂಸ್ಥಾನಗಳ ಮಹಾರಾಜರು ತಮ್ಮ ಜನತೆಯನ್ನು ಪ್ರಶ್ನಿಸಿದರೇ? ಇಲ್ಲ! ಅವರೆಂದಿಗೂ ಅವರ ಸಮ್ಮತಿ ಬಯಸಲೇ ಇಲ್ಲ. ಆ ಸಂಸ್ಥಾನಗಳು ಲೀನೀಕರಣವಾಗಬೇಕೆಂದಾಗ ಅಲ್ಲಿ ವಿರೋಧವೇ ಪ್ರತಿಯಾಗಿ ಉಂಟಾಗಲಿಲ್ಲವೇನು ?

ಮೈಸೂರಿನ ವಿಷಯದಲ್ಲಿ ಮಾತ್ರ ಜನತಿಯ ಸಮ್ಮತಿ ಬೇಕೆಂದು ಹೇಳುವುದು ಎಲ್ಲಿಯನ್ಯಾಯ? ಸಮಸ್ತ ಕನ್ನಡ ಕುಲವೆಲ್ಲ ಮೈಸೂರನ್ನೊಳಗೊಂಡ ಬೃಹತ್ ಕರ್ನಾಟಕದ ಯೋಜನೆಗೆ ಒಪ್ಪಿಕೊಂಡಿದೆ. ಕೊಲ್ಹಾಪುರದ ಮಾತು ಬಂದಾಗ ಈ ತತ್ವ ತಲೆಯೆತ್ತಿ ನಿಲ್ಲುವುದಕ್ಕೆ ಸಾಧ್ಯವಿರಲಿಲ್ಲ!

ಅಲ್ಲಿ ಜನತೆ ವಿರೋಧಿಸಿದರು. ಬಡೋದಾ ಸಂಸ್ಥಾನದ ವಿಷಯದಲ್ಲಂತೂ ಇಬ್ಬಣಗಳಾಗಿ ಬಿಟ್ಟವು. ಇದನ್ನು ಎಷ್ಟೂ ಗಮನಿಸದೆ ಸಂಸ್ಥಾನ ಶಾಖೆಯ ಮಂತ್ರಿಗಳು ಮಹಾರಾಜರಿಂದ ವಿಶೇಷ ಕಾಯಿದೆ ಹೊರಡಿಸಿ ಹಿಂದೀ ಒಕ್ಕೂಟದಲ್ಲಿ ಅವರ ಸಂಸ್ಥಾನಗಳನ್ನು ಕರಗಿಸಿ ಬಿಟ್ಟರು. ಈಗಲೂ ಕರ್ನಾಟಕದ ಈ ಪ್ರಶ್ನೆಯಲ್ಲಿ ಆಗ ಮಾಡಿದಂತೆ ಕೇಂದ್ರದ ಸಂಸ್ಥಾನ ಶಾಖೆಯ ಮಂತ್ರಿಗಳು ಮಾಡಬಹುದಿತ್ತು. ಮಾಡಿದ್ದರೆ ಘಟನಾತ್ಮಕ ದಾರಿಯಲ್ಲಿ ತೊಂದರೆಗಳು ಅಡ್ಡ ಬರುವುದಕ್ಕೆ ಕಾರಣವೇ ಇರಲಿಲ್ಲ!

ಘಟನಾತ್ಮಕ ತೊಡಕಿನ ಮಾತನ್ನು ಈಗ ಕಾರ್ಯವಾಹಕ ಮಂಡಲಿಯು ಮುಂದೆ ತಂದದ್ದು ಶೋಚನೀಯ! ಕೇಂದ್ರ ಸರಕಾರ

ಕ್ಕಿರುವ ತೊಂದರೆಗಳ ಕಡೆಗೆ ಕರ್ನಾಟಕವು ಕಣ್ಣು ಮುಚ್ಚಿಲ್ಲ. ನಿರ್ದಿಷ್ಟ ಸಮಯದಲ್ಲಾದರೂ ಕರ್ನಾಟಕ ಪ್ರಾಂತ ರಚನೆಯಾಗುವದೆಂಬ ಭರವಸೆ ಯಾದರೂ ಬೇಕಿತ್ತು. ಆ ದಿಶೆಯಲ್ಲಿ ಕಾರ್ಯ ನಡಸುವುದಕ್ಕೆ ಒಂದು ಸಲಹಾ ಸಮಿತಿಯು ಏರ್ಪಾಡಾದರೂ ಆಗಬೇಕಿತ್ತು!

ಕ. ಪ್ರಾ. ಕಾಂಗ್ರೆಸ್ಸು ರಾಜೀನಾಮೆಯನ್ನು ಕೊಡಲು ಅಪ್ಪಣೆ ಬೇಡಿದುದನ್ನು ಅಯೋಗ್ಯವೆಂದು, ಅಕಾಲಿಕವೆಂದು, ರಾಷ್ಟ್ರ ವಿರೋಧಿ ಯೆಂದು, ಕಾಂಗ್ರೆಸ್ಸಿಗೆ ಕಲಂಕ ತರುವಂತಹದೆಂದು ಕಾರ್ಯವಾಹಕ ಮಂಡಲಿಯು ದೂಷಿಸಿತು. ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಾರ್ಯ ವಾಹಕ ಸಮಿತಿಯ ಠರಾವಿನಲ್ಲಿ 'ರಾಜೀನಾಮೆ ಕೊಡಲು ಅಪ್ಪಣೆ ಬೇಡಬೇಕೆಂಬ' ಆಶಯವಿದೆ. ಮತದಾರರ ಸಂಘಗಳು ತಮ್ಮನ್ನು ಪ್ರತಿ ನಿಧಿಸುವ ಸದಸ್ಯರಿಂದ ರಾಜೀನಾಮೆಯನ್ನು ಒತ್ತಾಯದಿಂದ ಬಯಸು ತ್ತಿವೆಯೆನ್ನುವುದೂ ಇನ್ನೊಂದು ಕಾರಣ. ಆ ದೃಷ್ಟಿಯಿಂದ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಮಿತಿಯದಾಗಲಿ, ಕಾರ್ಯವಾಹಕ ಮಂಡಲಿಯ ದಾಗಲಿ, ಶಾಸನ ಸಭಾ ಸದಸ್ಯರದಾಗಲಿ ಏನೂ ತಪ್ಪಿಲ್ಲ. ತಮ್ಮನ್ನು ಸಾರ್ವತ್ರಿಕ ಚುನಾವಣೆಯ ರಂಗಕ್ಕಿಳಿಸಿದ ಸಂಸ್ಥೆಯ ಅಪ್ಪಣೆಯನ್ನು ರಾಜೀನಾಮೆ ಕೊಡುವ ಮುನ್ನ ಬೇಡುವುದು ಸಹಜವೇ ಆಗಿದೆ.

ಇಂತ ಸಂದರ್ಭದಲ್ಲಿ ಇದೊಂದೇ ಘಟನಾತ್ಮಕ ದಾರಿ. ಮತ ದಾರರೇ ರಾಜೀನಾಮೆ ಬೇಡುತ್ತಿರುವಾಗ ಕ. ಪ್ರಾ. ಕಾಂಗ್ರೆಸ್ಸಾಗಲಿ, ಶಾಸನ ಸಭಾ ಸದಸ್ಯರಾಗಲೀ ಆ ಬೇಡಿಕೆಯನ್ನು ಎತ್ತಿಕೊಂಡರೆ ಕಾಂಗ್ರೆ ಸ್ಸಿಗೆ ಅವರು ಹೇಗೆ ವಿರೋಧಿಗಳಾದಾರು?

ಇದು ಉದ್ವಿಘ್ನತೆಯ ಕಾರ್ಯ, ಅಸಾಧ್ಯವಾದ ದಾರಿಯೆಂಬ ಅಪಾ ದನೆಯನ್ನು ಹಾಯ್‌ಕಮಾಂಡು ಹೊರಿಸುವುದಾದರೆ ಆ ಆರೋಪದ ಬಹು ಭಾಗವನ್ನು ಅವರೇ ಹೊರಬೇಕಾದೀತು. ಕರ್ನಾಟಕದ ಕಾಂಗ್ರೆಸ್ ಕಾರ್ಯಕರ್ತರು ಅಂತ ಆರೋಪವನ್ನು ಎಂದೂ ಒಪ್ಪಲಾರರು!

ಕ. ಪ್ರಾ. ಕಾಂಗ್ರೆಸ್ಸು ಮಾಡಿದ ವಿಚಾರವೆಲ್ಲವೂ ಹಾಯ್ ಕಮಾಂಡದ ಅರಿಕೆಗೆ ಮೊದಲೇ ಬಂದಿದೆ. ಹೋದ ವರುಷ ದಶಂಬರ

ತಿಂಗಳಲ್ಲಿ ಅಖಿಲಭಾರತ ಕಾಂಗ್ರೆಸ್ ಅಧ್ಯಕ್ಷರು ಕ. ಪ್ರಾ. ಕಾಂಗ್ರೆಸ್ಸ್ ಅಧ್ಯಕ್ಷರಿಗೆ ಕಾಗದ ಬರೆದು ಪ್ರಾಂತರಚನೆಯ ಕಾರ್ಯದಲ್ಲಿ ಕರ್ನಾಟಕ ಮತ್ತು ಆಂಧ್ರ ಪ್ರಾಂತಗಳನ್ನು ಒಂದೇ ದೃಷ್ಟಿಯಿಂದ ನೋಡಲಾಗುವ ದೆಂದು ತಿಳಿಸಿದರು. ಈಗ ಮಾತ್ರ ಕರ್ನಾಟಕವನ್ನು ಕಡೆಗಣಿಸಿ ಆಂಧ್ರ ಪ್ರಾಂತ ರಚನಗೆ ಪ್ರಾಶಸ್ತ್ಯವನ್ನಿತ್ತಂದು ಕರ್ನಾಟಕದ ಶಾಸನದ ಸಭಾ ಸದಸ್ಯರು ಅದನ್ನು ವಿರೋಧಿಸಿದರೆ ಅವರೆಂತು ದೋಷಿಗಳಾದಾರು? ಆರೋಪವನ್ನು ಒಪ್ಪಿಕೊಂಡಾರು? ಕ. ಪ್ರಾ. ಕಾಂಗ್ರೆಸ್ ಕೈಕೊಂಡ ನಿರ್ಣಯ ನಿಜಕ್ಕೂ ಸಮಯೋಚಿತವಾಗಿದೆಯೆನ್ನುವಲ್ಲಿ ಎರಡು ಅಭಿ ಪ್ರಾಯಗಳೇ ಇಲ್ಲ!

ಒಂದು ವೇಳೆ ಹಾಯ್ ಕಮಾಂಡಿನ ನಿರ್ಣಯವೇ ಕೊನೆಯ ನಿರ್ಣಯವಾಗುಳಿದರೆ ಕರ್ನಾಟಕದಲ್ಲಿ ಜ್ವಾಲಾಮುಖಿಯೇಳುತ್ತದೆ, ಸಂದೇಹವೇ ಇಲ್ಲ!

---

# ದುಃಖಿಯ ಕಥೆ !

ಇದು ಅತ್ಯಂತ ದುಃಖಿಯೊಬ್ಬನ ಕಥೆ! ಹೆಸರು ನಿಜಲಿಂಗಪ್ಪ. ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ಸಿನ ಅಧ್ಯಕ್ಷ ಅವರು. **ಘಟನಾ** ಸಮಿತಿಯು, ವರ್ಕಿಂಗ ಕಮಿಟಿ, ಪಾರ್ಲಿಮೆಂಟರಿ ಬೋರ್ಡ—ಇವೆಲ್ಲವುಗಳ ಸದಸ್ಯರು.

ಮೈಸೂರಿನ ಧುರೀಣರು. ಕಾಂಗ್ರೆಸ್ಸಿನ ನಿಷ್ಠಾವಂತ ಕಾರ್ಯಕರ್ತ. ಗಾಂಧೀಜಿಯ ತತ್ವಗಳನ್ನೆಲ್ಲ ಶ್ರದ್ಧೆಯಿಂದ ಬಾಳಿನಲ್ಲಿ ಅರಗಿಸಿಕೊಂಡ ಕಟ್ಟಾ ಅನುಯಾಯಿ. ದೇಶದ ಇತರ ಭಾಗದಲ್ಲಿಯ ನಾಯಕರಂತೆ ನಿಜಲಿಂಗಪ್ಪ ಕೂಡ ನಾಡಿನ ಬಿಡುಗಡೆಯ ಹೋರಾಟದಲ್ಲಿ ದೇಹ ತೆಯ್ದವರು !

ಅವರದು ವಕೀಲಿ ವೃತ್ತಿ. ಆದರೆ ಅವರ ದೇಶಪ್ರೇಮ ಆ ದಾರಿಯಲ್ಲಿ ಅಡ್ಡ ಬಂದಿತು. ಸರಕಾರ ಸನದು ಕಸಿದುಕೊಂಡಿತು. ನಿಜಲಿಂಗಪ್ಪ ಅಂಜಲಿಲ್ಲ, ಧೈರ್ಯ ಮಾಡಿದರು. ಅವಿರತ ಹೋರಾಟ, ಅಜೇಯ್ಯ ಆಶಾವಾದ, ಕರ್ತವ್ಯ ದಕ್ಷತೆ, ಕಷ್ಟ ಸಹಿಷ್ಣುತೆ—ಅವರ ಈ ಆದರ್ಶ ಗುಣಗಳು ಬಾಳಿನಲ್ಲಿ ನೆರವಾಗಿ ನಿಂತವು. ಕನ್ನಡಿಗರಿಗೂ ಇದರಿಂದಾಗಿ ಸ್ಫೂರ್ತಿ ದೊರೆತಂತಾಯಿತು, ನಾಡ ಬಿಡುಗಡೆಯ ಕಾಳಗದಲ್ಲಿ ಜನಸಾಮಾನ್ಯರಿಗೆ ನವ ಚೈತನ್ಯ ಪ್ರಾಪ್ತವಾದಂತಾಯಿತು.

೧೯೫೦, ದಶಂಬರ ತಿಂಗಳ ಕೊನೆಯ ವಾರ. ಮಲಬಾರ ದಿನ್ನೆಯ ಮೇಲಿನ ವಿಶಾಲವಾದ ಬಂಗಲೆಯ ಮುಂದುಗಡೆಯಲ್ಲಿ ನಾನು ಅವರನ್ನು ಕಂಡೆ. ಇದಿರಿನಲ್ಲಿ, ಕೆಳಗಡೆ ವಿಸ್ತಾರವಾಗಿ ಚಾಚಿದ ಕಡಲ ನೀರನ್ನು ನಿಜಲಿಂಗಪ್ಪ ಏಕ ಚಿತ್ತದಿಂದ ನಿರೀಕ್ಷಿಸುತ್ತ ನಿಂತುಕೊಂಡಿದ್ದರು. ಅವರು ದಿಲ್ಲಿಯಿಂದ ತುಸು ಹೊತ್ತಿನ ಹಿಂದೆ ಆಗಮಿಸಿದರು. ವರ್ಕಿಂಗ ಕಮಿಟಿಯ ಸಭೆಗೆ ಹೋಗಿದ್ದರು. ವರ್ಕಿಂಗ ಕಮಿಟಿ ಅನಿಯಮಿತ ಅವಧಿಯವರೆಗೆ ಸಂಯುಕ್ತ ಕರ್ನಾಟಕ ನಿರ್ಮಾಣದ ಯೋಜನೆಯನ್ನು ಮುಂದೆ ತಳ್ಳಿತ್ತು. ಆ ನಿರ್ಣಯ ಅವರ ಮನಸ್ಸನ್ನು ಕವಿದಿತ್ತು.

ಅದೇ ಜಾಗದಲ್ಲಿ ಅವರು ದಿಲ್ಲಿಗೆ ಹೊರಡುವ ಮುನ್ನ ನಾನು ಅವರನ್ನು ಕಂಡಿದ್ದೆ. ಆಗ ನಗು ಮುಖವಿತ್ತು. ಕಣ್ಣುಗಳಲ್ಲಿ ಹೊಳಪಿತ್ತು. ನಗೆಯಿಲ್ಲಿ ಗೆಲವು, ನೋಟದಲ್ಲಿ ಮಿಂಚು ಇತ್ತು. ಹುಬ್ಬಿನ ಕೆಳಗಡೆ ತಿರುಗಾಡುತ್ತಿದ್ದ ಕಣ್ಣು ಗುಡ್ಡೆಯಲ್ಲಿ ಅಬ್ಬರದ ಆಶಾವಾದ ಇದ್ದಿತು. ತನ್ನ ಸಹೋದ್ಯೋಗಿಗಳ, ವರಿಷ್ಠಮಂಡಲದವರ ಮನಸ್ಸನ್ನು ನಿರಾಯಾಸವಾಗಿ ಗೆಲ್ಲಬಲ್ಲೆನೆಂಬ ಕಳೆ ಅವರ ಮುಖದ ಮೇಲೆ ಆಗ ಎದ್ದು ತೋರುತ್ತಲಿದ್ದಿತು. ರಾಯಭಾರದ ಯಶಸ್ಸಿನಲ್ಲಿ ಅಪನಂಬಿಕೆಯೇ ಆಗ ಇರಲಿಲ್ಲ. ಪಾರ್ಲಿಮೆಂಟರಿ ಬೋರ್ಡು ಮತ್ತು ವರ್ಕಿಂಗ ಕಮೀಟಿಯ ಸಭೆಗಳಿಗೆ ಅವರು ಹೊರಟಿದ್ದರು. ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮೀಟಿಯ ರಾಜೀನಾಮೆಯ ಬಗೆಗೆ ಆ ಸಭೆಗಳಲ್ಲಿ ನಿರ್ಣಾಯಕ ಚರ್ಚೆಯಾಗಲಿದ್ದಿತು.

ವಕೀಲರು ಸಂಗ್ರಹಿಸುವಂತೆ ಅವರು ಎಲ್ಲ ಕಾಗದ ಪತ್ರಗಳನ್ನೂ ಮಾಹಿತಿಯನ್ನೂ ಸಂಗ್ರಹಿಸಿದ್ದರು. ಸಂಯುಕ್ತ ಕರ್ನಾಟಕದ ನಿರ್ಮಾಣದ ಅಗತ್ಯತೆಯನ್ನು ಕುರಿತು ಯಾರೂ ಒಪ್ಪಬಹುದಾದ ಅಂಕೆ ಸಂಖ್ಯೆಗಳೇ, ಮುಂತಾದ ಅಂಬುವುಗಳೆಲ್ಲ ನಿಜಲಿಂಗಪ್ಪನವರ ಬತ್ತಳಿಕೆಯಲ್ಲಿದ್ದವು.

ಒಳ್ಳೆಯ ದೃಢ ನಿರ್ಧಾರಕ್ಕೆ ಖಂಡಿತ ತಾವು ಬರುತ್ತೇವೆಂಬುದಾಗಿ ಅವರು ಸೂಚಿಸಿದರು. ವರ್ಕಿಂಗ ಕಮೀಟಿ ಈ ದಾರಿಯಲ್ಲಿ ಬಳಗ ಹೊಡೆಯಲಾರದೆಂದೂ ಆ ಬಗೆಗೆ ತಮಗೆ ಖಚಿತವಾದ ನಂಬುಗೆಯಿದೆಎಂದೂ ಅಂದರು. ಕನ್ನಡಿಗರ ಸಕಾಲವೂ ಯೋಗ್ಯವೂ ಆದ ಭಾಷಾವಾರ ಪ್ರಾಂತ ರಚನೆಯ ಬೇಡಿಕೆಯನ್ನು ವರ್ಕಿಂಗ ಕಮೀಟಿ ಮನ್ನಿಸುವುದು. ಪ್ರಾಂತ ರಚನೆಯ ವಿಷಯವನ್ನು ಆದಷ್ಟು ಬೇಗನೆ ಕಾರ್ಯ ರಂಗಕ್ಕಿಳಿಸುವಲ್ಲಿ ಸಮಿತಿಯೊಂದನ್ನು ಅದು ನಿಶ್ಚಯಿಸುವುದೆಂದೂ ಅವರು ಹೇಳಿದರು.

ಆದರೆ ಈಗ....? ನಾನು ಇನ್ನೊಬ್ಬ ನಿಜಲಿಂಗಪ್ಪನವರನ್ನೇ ಕಂಡಂತೆ ಆಯಿತು. ತಮ್ಮ ನಿಯೋಗ ನಿಷ್ಫಲವಾಗಿದೆ. ನಿರಾಶೆ ಮುಂದಿದೆ. ಮನಸ್ಸಿನಲ್ಲಿ ಕತ್ತಲು ತುಂಬಿದೆ. ಮುಖದಮೇಲೆ ನೋವಿನ ಗೆರೆ ಮೂಡಿವೆ. ಗಾಯಗೊಂಡ ಹುಲಿ ತನ್ನ ಗಾಯವನ್ನೇ ನೆಕ್ಕುತ್ತಿದೆ. ಗಾಯ ಅಳಿದ ಮೇಲೆ ಶಕ್ತಿ ತುಂಬಿ ಬಂದೀತು ! ಹುಲಿ ಆಗ ಸಿಡಿದೇಳುವ ಹಂಚಿಕೆಯಲ್ಲಿ ಜಪ್ಪಿಸುತ್ತಿದೆ. ಕೊಪ್ಪರಿಗೆಯಂತೆ ಡಬ್ಬು ಹಾಕಿದ ನೀಲಿಮಯ

ಚಾನಿನೆಡೆಗೊಮ್ಮೆ ಇದಿರಿಗೆ ಪ್ರಶಾಂತವಾಗಿ ಹಬ್ಬಿದ ಕಡಲಿನೆಡೆಗಿನ್ನೊಮ್ಮೆ ಎವೆಯಿಕ್ಕದೆ ನಿಂತ ನಿಜಲಿಂಗಪ್ಪನವರನ್ನು ಕಂಡಾಗ ನನಗೆ ಗಾದೆಯ ಮಾತೊಂದು ನೆನಪಿಗೆ ಬಂದಿತು. ಅತ್ತೆಗೊಂದು ಕಾಲವಾದರೆ ಸೊಸೆಗೊಂದು ಕಾಲ ಬರಲೇಬೇಕು !

ನಿಮ್ಮ ಮನಸ್ಸು ನೊಂದಂತೆ ನಿಮ್ಮ ಮುಖ ಸೂಚಿಸುತ್ತಿದೆಯಲ್ಲ ? ಎಂದು ನಾನು ಅವರನ್ನು ನೋಡುತ್ತ ಅಂದೆ. ನನಗೆ ಕಂಡು ಬಂದಿತ್ತು. ಏನೋ ಅವರ ಸ್ಥಿಮಿತ ಮನಸ್ಸನ್ನು ಕದಡಿಸಿದೆ. ಕಣ್ಣು ಕನಸಿನಿಂದ ಎದ್ದು ಬಂದವರಂತೆ ತೋರುತ್ತಲಿವೆ. ಅದಕ್ಕೇ ನಾನು ಹಾಗೆ ಅಂದದ್ದು.

'ನಿಮಗೆ ಗೊತ್ತೇ ಇದೆಯಲ್ಲ ? ನಡೆದ ಸಂಗತಿ ತಿಳಿದ ಮೇಲೆ ಬೇರೆ ಇನ್ನೇನು ಹೇಳುವದಿದೆ ? ' ಹಾಗೆ ನಿಜಲಿಂಗಪ್ಪ ಹೇಳಿದರು. ಅವರ ಧ್ವನಿಯಲ್ಲಿ ಕಂಪಿತ ಭಾವನೆಯಿತ್ತು. ಅವರು ಹಾಗೇಕೆ ಅನ್ನುತ್ತಿದ್ದಾರೆ ಎನ್ನುವುದರ ಅರ್ಥ ನನಗೆ ತಿಳಿಯದೆ ಇರಲಿಲ್ಲ. ವರ್ಕಿಂಗ ಕಮೀಟಿಯ ನಿರ್ಣಯ ಅವರ ಮೇಲೆ ಅಂತ ಪರಿಣಾಮ ಮಾಡಿದ್ದಿತು. ಸೇಡಿನ ಧ್ವನಿಯಗಲಿ ರೊಚ್ಚಿನ ಸೂಚನೆಯಾಗಲಿ ಅವರ ಮಾತಿನಲ್ಲಿ ಇರಲಿಲ್ಲ. ಆದರೂ ಅವರ ಸರಳ ಮಾತು ತುಂಬ ಅರ್ಥ ಗರ್ಭಿತವಾಗಿದ್ದಿತು. ಶಾಂತಿ ಪ್ರಿಯ ನಿಜಲಿಂಗಪ್ಪ ಸಂಧಾನಕ್ಕೆ ಯಾವಾಗಲೂ ಸಿದ್ಧ. ಸಹೋದ್ಯೋಗಿಗಳಲ್ಲಿ ಅವರಿಗಿರುವ ನಂಬುಗೆ ಅನ್ಯಾದೃಶ. ತಾವು ಕಂಡ ಸತ್ಯದಲ್ಲಿ ಅಚಲಿತ ಮನೋಧೈರ್ಯ. ಯಾರನ್ನೂ ನೋಯಿಸಬೇಕೆಂಬ ಚಲವಿಲ್ಲ. ವರ್ಕಿಂಗ ಕಮೀಟಿಯಲ್ಲಿನ ತಮ್ಮ ಸಹೋದ್ಯೋಗಿಗಳಿಂದ ದೂರವಾಗುಳಿಯಬೇಕೆಂಬ ಮಾತು ಇನ್ನೂ ದೂರ ದೂರ !

'ನೀವು ಅನ್ನಬೇಡಿದಿರಿ, ಆದರೆ ನಿಮಗೆಕಲ್ಲು ಸಿಕ್ಕವು, ಅಷ್ಟೇ' ಎಂದು ನಾನು ಉದ್ಗಾರ ತೆಗೆದಾಗ ನಿಜಲಿಂಗಪ್ಪ ಉತ್ತರಿಸುವದಕ್ಕೆ ಶಬ್ದ ಹುಡುಕಾಡುವಂತೆ ಕಂಡರು. ಅಖಂಡ ಕರ್ನಾಟಕದ ನಕ್ಷೆಯನ್ನು ಕಡಿದು ಕಡಿದು ನುಚ್ಚು ನೂರು ಮಾಡಿದವರನ್ನು ಅವರು ಯಾವ ಮಾತಿನಲ್ಲಿ ಖಂಡಿಸಿ ಹೇಳಿಯಾರು ? ಒಮ್ಮಿಂದೊಮ್ಮೆಲೆ ಮುಖದಲ್ಲಿ ಗಂಭೀರ್ಯ ಮೂಡಿತು. ಬಹುಶಃ ಅವರಿಂದ ನಾನು ಬಹಳ ಅಪೇಕ್ಷಿಸುತ್ತಿರುವಂತೆ ನನಗೇ ಅನ್ನಿಸಿತು. ಆಗಸದ ಕಡೆಗೊಮ್ಮೆ ನಿರೀಕ್ಷಿಸುತ್ತ ನಿಜಲಿಂಗಪ್ಪ ಹೇಳಿದರು !! ಮೇಘ ಮಾಲೆ

ಗಳಿಂದ ರಂಜಿತವಾದ ಬಾನಿನಲ್ಲಿ ಮಿಂಚಿನ ಕಿರಣ ಮೂಡದೆ ಇದ್ದೀತೆ ? ”

ಈಯೊಂದು ಮಾತು ಆ ಮನುಷ್ಯನ ವ್ಯಕ್ತಿತ್ವವನ್ನೇ ಕಡೆದು ನನ್ನ ಮುಂದೆ ನಿಲ್ಲಿಸಿದಂತಾಯಿತು. ಅವರೂ ಇನ್ನೂ ಆಶಾವಾದಿಗಳಾಗಿಯೇ ತೋರಿದರು. ತಲೆಯ ಮೇಲೆ ನೇತಾಡುವ ವರಿಷ್ಠ ಮಂಡಲದ ಶಾಪದ ಖಡ್ಗವನ್ನು ಇರಿಸಿಕೊಂಡು ಬರಿಗೈಯಿಂದ ಮರಳಿದ ಈ ಮನುಷ್ಯ ಇನ್ನೂ ಹೇಗದು ಆಶಾವಾದಿಯಾಗಿದ್ದಾನಲ್ಲ ?
ಒಂದು ಮಾತಿನಬಗ್ಗೆ ಅವರು ಹೊಯ್ದಾಡದಂತೆ ತೋರಿದರು. ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮೀಟಿ ಯಾವುದೇ ನಿರ್ಣಯಕ್ಕೆ ಬಂದರೂ ಸರಿ, ಅದು ನಮಗೆಲ್ಲರಿಗೂ ಮಾನ್ಯವಾಗತಕ್ಕುದೇ. ಕನ್ನಡ ಜನತೆಯ ಆಸೆ ಆಕಾಂಕ್ಷೆಗಳಿಗೆ ತಕ್ಕಂತೆ ನೀವು ವರ್ತಿಸಲೇ ಬೇಕು. ನಮ್ಮ ಧ್ಯೇಯ ಸಿದ್ಧಿಗಾಗಿ ನಾವು ತ್ಯಾಗದ ಕರೆಯನ್ನು ಮುಂದು ಮಾಡದೆ ಇರಲಾರೆವು !

ಅವರ ಬಾಯಿಂದ ಬಂದ ಮಾತು ಇವು. ಅಲ್ಲಿ ಸಾರಳ್ಯವಿದೆ, ಕಳಕಳಿಯಿದೆ, ಸತ್ಯವಿದೆ, ದೇವರಲ್ಲಿ ಅಂಜಿಕೆಯಿದೆ.

“ಒಂದು ವೇಳೆ ವರ್ಕಿಂಗ ಕಮೀಟಿಯ ನಿರ್ಣಯದ ವಿರುದ್ಧ ನಿಂತ ಕ. ಪ್ರಾ. ಕಾಂಗ್ರೆಸ್ಸು ರಾಜೀನಾಮೆಗಳನ್ನು ಕೊಡಲೇ ಬೇಕೆಂಬ ನಿರ್ಧಾರಕ್ಕೆ ಬಂದರೆ, ಮುಂದೇನು ? ” ಎಂದು ನಾನು ಪ್ರಶ್ನಿಸಿದೆ.

“ನಾವು ಅದನ್ನು ಮನ್ನಿಸುತ್ತೇವೆ. ಈ ಪ್ರಶ್ನೆ ಜೀವ ಜೀವಾಳದ ಪ್ರಶ್ನೆ. ” ಇದು ನಿಜಲಿಂಗಪ್ಪನವರು ಕೊಟ್ಟ ಉತ್ತರ. ಆಗ ಸಮಯೋಚಿತವಾಗಿ ನಾನು ಅವರಿಗೆ ಕರ್ನಾಟಕ ಪ್ರಾಂತ ನಿರ್ಮಾಣದ ಪ್ರಶ್ನೆ ಮೈಸೂರು ಮತ್ತು ಒಕ್ಕೂಟ ಕರ್ನಾಟಕದ ಕನ್ನಡಿಗರಿಗೆ ಸಾವು ಬದುಕಿನ ಪ್ರಶ್ನೆಯಾಗಿರುವುದೆಂಬದನ್ನು ಎತ್ತಿ ತೋರಿಸುತ್ತ ನಾಡ ತುಂಬೆಲ್ಲ ಈ ಬಗೆಗೆ ಪ್ರಕ್ಷುಬ್ಧ ವಾತಾವರಣ ಏಳುತ್ತಿರುವುದನ್ನು ಸೂಚಿಸಿದೆನು. ಕನ್ನಡಿಗರು ಕ. ಪ್ರಾ. ಕಾಂಗ್ರೆಸ್ಸಿನ ನಿರ್ಣಯವನ್ನು ಕಾರ್ಯ ರಂಗಕ್ಕಿಳಿಸುವಲ್ಲಿ ಬದ್ಧಕಂಕಣರಾಗಿರುವದೆಂಬ ಸಂಗತಿಯನ್ನು ಅವರ ಲಕ್ಷ್ಯಕ್ಕೆ ತಂದು ಕೊಟ್ಟಾಗ ನಿಜಲಿಂಗಪ್ಪ ಗಂಭೀರವಾಗಿಯೇ ಹೇಳಿದರು.

“ನಿಜ, ನಿಜವಪ್ಪ ಸ್ನೇಹಿತರೆ ! ಜನತೆ ಕ್ಷೋಭೆಗೊಂಡಿದೆ. ಜನತೆಯ ಆಶಯದ ವಿರುದ್ಧ ನಾವೆಂದೂ ನಡೆಯಲಾರೆವೆಂಬ ಮಾತನ್ನು ನಿಮಗೆ

ಮೊದಲೇ ತಿಳಿಸಿದ್ದೇನೆ'' ಆಗ ಶ್ರೀಯುತರು ಅಖಂಡ ಕರ್ನಾಟಕ ನಿರ್ಮಾಣದ ಬಗೆಗೆ ಅವ್ಯಾಹತವಾಗಿ ನಡೆದು ಬಂದ ಹೋರಾಟದ ವಿಹಂಗಮ ಚಿತ್ರವನ್ನು ನನ್ನ ಕಣ್ ಮುಂದೆ ಇರಿಸಿದರು. ೧೯೨೮ರಲ್ಲಿಯೇ ನೆಹರು ಸಮಿತಿ ಪ್ರಾಂತ ರಚನೆಯ ತತ್ವವನ್ನು ಒಪ್ಪಿಕೊಂಡಿತ್ತು. ಮುಂದೆ ೧೯೩೮ರಲ್ಲಿ ವರ್ಧಾದಲ್ಲಿ ಕಾಂಗ್ರೆಸ್ ಕಾರ್ಯವಾಹಕ ಮಂಡಲಿಯ ಸಭೆ ಕೂಡಿದಂದು ಅಧಿಕಾರ ರೂಢವಾದೊಡನೆಯೆ ಕಾಂಗ್ರೆಸ್ಸು ಕರ್ನಾಟಕ ಪ್ರಾಂತ ರಚನೆಯ ನಿರ್ಮಾಣಕ್ಕೆ ಅವಕಾಶವನ್ನೊದಗಿಸಿ ಕೊಡಬೇಕೆಂದು ನಿರ್ಣಯ ಮಾಡಿತು, "೧೯೪೭ ರಿಂದ ಮದರಾಸು ಮತ್ತು ಮುಂಬಯಿಯ ಶಾಸನ ಸಭೆಗಳು ಅದೇ ಬೇಡಿಕೆಯನ್ನು ಮನ್ನಿಸುತ್ತಲೇ ಬಂದಿವೆ."

"ನೀವು ಹೇಳುವ ಈ ಮಾತು ಎಲ್ಲರಿಗೂ ಗೊತ್ತೇ ಇದೆ ನಿಜಲಿಂಗಪ್ಪನವರೇ! ಆದರೆ ಇದಕ್ಕೆ ಹೊಸ ಸುದ್ದಿ ಇನ್ನೇನಾದರೂ ಇದ್ದರೆ ಹೇಳುತ್ತೀರಾ ?"

ಅವರು ಈ ಪ್ರಶ್ನೆಯನ್ನು ಕೇಳಿ ಕ್ಷಣಹೊತ್ತು ಮೌನ ತಳೆದರು. ಕಣ್ಣುಗಳಲ್ಲಿ ಮಿಂಚಿನ ಸಂಚಾರವಾಯಿತೆಂದು ತೋರುತ್ತದೆ. ಕೂಡಲೇ ಮೇಜಿನ ಮೇಲೆ ಇದ್ದ ಕೆಲವು ಕಾಗದ ಪತ್ರಗಳನ್ನು ಶ್ರೀಯುತರು ಎತ್ತಿಕೊಂಡು "ಇಲ್ಲಿ ನೋಡಬೇಕು" ಎಂದು ಹೇಳಿದರು. ನನ್ನೆಡೆಗೆ ಒಂದು ಪುಸ್ತಕಾವಲಿಯನ್ನು ಕೊಡುತ್ತ "ಇದನ್ನು ಓದಿರಿ" ಎಂದರು. ಅದು ಸರದಾರರ ಭಾಷಣದ ಪ್ರತಿ. ೧೯೪೬ ಜನೆವರಿ ತಿಂಗಳು ೧೯ನೆಯ ತಾರೀಖಿಗೆ ಮುಂಬಯಿಯಲ್ಲಿ ಅಖಿಲ ಕರ್ನಾಟಕ ಏಕೀಕರಣ ಪರಿಷತ್ತಿನ ಸಮಯದಲ್ಲಿ ಸರದಾರರು ಮಾಡಿದ ಉದ್ಘಾಟನಾ ಭಾಷಣ. ಸರದಾರರು ಹೀಗೆ ಹೇಳಿದ್ದರು.

"ನಿಮ್ಮೊಂದಿಗೆ ಕೂಡಿಕೊಂಡು ನಿಮ್ಮ ಬೇಡಿಕೆಗಳನ್ನು ಮುಕ್ತ ಮನಸ್ಸಿನಿಂದ ನಡೆಸಿಕೊಡಬೇಕೆಂದು ಹೇಳುವವರಲ್ಲಿ ನಾನೂ ಒಬ್ಬನೆಂದು ಹೇಳಲು ನನಗೆ ಬಹಳ ಸಂತೋಷವಾಗುತ್ತದೆ ಕನ್ನಡ ಜನತೆಯ ಆಸೆ ಆಕಾಂಕ್ಷೆಗಳ ಅರಿವು ನನಗಿದೆ. ಕನ್ನಡ ಮಾತನ್ನಾಡುವವರೆಲ್ಲರೂ ಕನ್ನಡ ಪ್ರಾಂತದ ಛತ್ರಿಗೆಯ ಆಶ್ರಯದಲ್ಲೇ ನಿಲ್ಲಬೇಕೆಂಬಾಶಯಕ್ಕೆ ನನ್ನ ಹೃತ್ಪೂರ್ವಕ ಬೆಂಬಲವಿದೆ. ಹರಿದ ಕನ್ನಡ ನಾಡು ಒಂದಾಗಬೇಕು.

ಸದ್ಯಕ್ಕಿರುವ ಭಾರತದ ಪ್ರಾಂತಗಳು ಯಾವೊಂದು ತತ್ವದ ಮೇಲೆ ಉಚಿತ ವಾಗಿಲ್ಲವೆಂಬ ಮಾತು ಸುಸ್ಪಷ್ಟವಿದೆ. ಐತಿಹಾಸಿಕ ದೃಷ್ಟಿಯಿಂದಾಗಲಿ, ಭೌಗೋಲಿಕ ದೃಷ್ಟಿಯಿಂದಾಗಲಿ, ಅಥವಾ ಆರ್ಥಿಕ ಇಲ್ಲವೆ ಭಾಷಾವಾರ ದೃಷ್ಟಿಯಿಂದಾಗಲಿ ಯಾವ ದೃಷ್ಟಿಕೋನದಿಂದ ನೋಡಿದರೂ ಸದ್ಯದ ಪ್ರಾಂತ ರಚನೆ ಅಸಂಬದ್ಧವಾಗಿಯೇ ತೋರುತ್ತಿದೆ. ತಮ್ಮ ಆಡಳಿತ ಭದ್ರವಾಗಬೇಕೆಂಬ ದೃಷ್ಟಿಯಿಂದ ಬ್ರಿಟಿಶರು ಅವಸರದಿಂದಲೇ ಜನತೆಯ ಹಿತಾಹಿತಗಳನ್ನು ಗಮನಿಸದೆ ಪ್ರಾಂತಗಳ ಗೆರೆಗಳನ್ನು ಕೊರೆದು ಬಿಟ್ಟರು. ಆ ಕಾರ್ಯದಲ್ಲಿ ಜನಸಾಮಾನ್ಯರ ಅಭಿಪ್ರಾಯಕ್ಕೆ ಸರಕಾರ ಎಷ್ಟೂ ಗಮನಕೊಡದೆ ಹೋಯಿತು. ರಾಜ್ಯದ ಆಡಳಿತದ ದೃಷ್ಟಿಯಿಂದಲೂ ಆ ರೀತಿಯ ಪ್ರಾಂತ ರಚನೆ ಯಶಸ್ವಿಯಾಗದೆ ಹೋಯಿತು. ಅದರ ಫಲವಾಗಿ ಕನ್ನಡಿಗರು ಹಲವೊಂದು ಆಡಳಿತಗಳ ಅಡಕೊತ್ತಿನಲ್ಲಿ ಸಿಲುಕಿ ಕೊರಗುವ ಹೊತ್ತು ಬಂದಿತು. ಕನ್ನಡ ನಾಡು ಹರಿದು ತುಂಡು ತುಂಡಾಗಿ ಬಿಟ್ಟಿತು!

ಇದೇ ರೀತಿ ಇನ್ನುಳಿದ ಹಲವು ಪ್ರಾಂತಗಳಿಗೂ ಅನ್ಯಾಯವಾಗಿದೆ. ಅದರಿಂದಾಗಿ ಆ ಆ ಪ್ರಾಂತಗಳ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಅಭಿವೃದ್ಧಿಯಾಗಿಲ್ಲ. ಭಾಷಾವಾರ ತಳಹದಿಯ ಮೇಲೆ ಪ್ರಾಂತ ರಚನೆ ಯಾಗಲೇಬೇಕು. ಎಲ್ಲರೂ ಇದನ್ನು ಒಪ್ಪಿಕೊಂಡಿದ್ದಾರೆ. ಜನಮತ ಗಣನೆಯೊಂದಿಗೆ ಈ ಕಾರ್ಯ ತ್ವರಿತಗತಿಯಿಂದ ನಡೆಯುವುದು ಅವಶ್ಯವಿದೆ.

ಕರ್ನಾಟಕಕ್ಕೆ ಉಜ್ವಲ ಗತವೈಭವದ ಇತಿಹಾಸವಿದೆ. ಆರನೆಯ ಶತಮಾನದಿಂದ ಹದಿನಾರನೆಯ ಶತಮಾನದವರೆಗಿನ ಕನ್ನಡ ನಾಡಿನ ಇತಿಹಾಸ ವೈಭವದ ಇತಿಹಾಸವಾಗಿದೆ. ಅದರ ಅರಸರು ದೂರ ದೂರದ ವರೆಗೆ ತಮ್ಮ ಸಾಮ್ರಾಜ್ಯದ ಗಡಿಯನ್ನು ಬೆಳಸಿದರು. ಕನ್ನಡ ನಾಡಿನ ಕಲೆ, ಸಾಹಿತ್ಯ, ಸಂಸ್ಕೃತಿ ಭರತ ದೇಶದ ವೈಭವಕ್ಕೆ ಅತ್ಯಮೋಘವಾದ ಕಾಣಿಕೆಯನ್ನು ಸಲ್ಲಿಸಿವೆ. ಇಂದಿನ ಕನ್ನಡ ಜನತೆಗೆ ಒಂದು ಭಾಷೆ, ಒಂದು ಸಂಸ್ಕೃತಿ ಇದೆ. ೧೯೦೭ ರಿಂದಲೂ ಕನ್ನಡಿಗರು ಏಕತಂತ್ರ ಆಡಳಿತವನ್ನು ನಿರ್ವಹಿಸುವ ಪ್ರಾಂತರಚನೆಗೆ ಹೋರಾಡುತ್ತಲೇ ಬಂದಿದ್ದಾರೆ. ಆದರೆ ಅದು ಬ್ರಿಟಿಶರ ಆಳ್ವಿಕೆಯ ಕಾಲ. ಜನತೆಯ ಹಿತದ ಕಾರ್ಯ ಅವರ

ಪಾಲಿನ ಕಹಿಗುಳಿಗೆ. ಕನ್ನಡದ ಜನತೆ ಅವರ ಕಿವಿಯಲ್ಲಿ ಏಕೀಕೃತವಾಗದ ಕನ್ನಡ ನಾಡು ಪ್ರಗತಿಯನ್ನು ಸಾಧಿಸಲಾರದೆಂದು ಗಡಚಿಕ್ಕುವಂತೆ ಕೂಗಿ ಕೂಗಿ ಹೇಳಿತ್ತು. ಆದರೆ ಅದೆಲ್ಲ ಅರಣ್ಯ ರೋದನವಾಯಿತು. ೧೯೨೧ ರಲ್ಲಿ ಕಾಂಗ್ರೆಸ್ಸು ಕಂಡ ಸತ್ಯವನ್ನು ಬ್ರಿಟಿಶ ಸರಕಾರ ಕೊನೆಗೂ ಒಪ್ಪಲಿಲ್ಲ.

ನಿಮ್ಮ ಬೇಡಿಕೆ ನ್ಯಾಯವಾಗಿದೆ. ಬ್ರಿಟಿಶ್ ಕರ್ನಾಟಕದ ವಿಸ್ತಾರ, ಜನಸಂಖ್ಯೆಯೇ ಈಗ ಸಾಕು. ಮೈಸೂರು ದೇಶಕ್ಕಿಂತಲೂ ಅದು ದೊಡ್ಡ ದಿದೆ. ಸಿಂಧದ ಎರಡು ಪಾಲಿನಷ್ಟು ವಿಸ್ತಾರವಿದೆ. ವಾಯವ್ಯ ಗಡಿನಾಡಿನ ಪ್ರಾಂತಕ್ಕಿಂತ ಮೂರು ಪಾಲು ದೊಡ್ಡದಿದೆ. ಕೊಡಗು ನಾಡಿನ ಪ್ರದೇಶ ಕ್ಕಿಂತ ೨೦ ಮೈಲು ಹೆಚ್ಚು, ಅದರ ಜನಸಂಖ್ಯೆಗಿಂತ ೪೦ ಪಾಲು ಹೆಚ್ಚು ಜನಸಂಖ್ಯೆ! ಮೈಸೂರು ಹೈದರಾಬಾದಿನ ಬಹು ಭಾಗವೆಲ್ಲ ಕನ್ನಡ ವನ್ನಾಡುವ ಜನರಿಂದ ತುಂಬಿದೆ. ಇದೆಲ್ಲ ಭಾಗ ಸಮಾವೇಶವಾದರೆ ಏಕೀಕೃತ ಕರ್ನಾಟಕ ಹಿಂದುಸ್ಥಾನದಲ್ಲೇ ಮಹತ್ವದ ದೊಡ್ಡ ಪ್ರಾಂತ ವಾಗುವಲ್ಲಿ ಸಂದೇಹವೇನು ?

"ವಿನಯಪೂರ್ಣವಾದ ನಿಮ್ಮ ಬೇಡಿಕೆ ಗೌರವಾರ್ಹವಾಗಿದೆ. ಸಂಸ್ಥಾನಗಳಲ್ಲಿ ಸೇರಿಹೋದ ಕನ್ನಡನಾಡಿನ ಭಾಗಕ್ಕೆ ನೀವು ಈಗ ಮನಸ್ಸು ಮಾಡಿಲ್ಲ. ಬ್ರಿಟಿಶ್ ಕರ್ನಾಟಕದ ಭಾಗವಷ್ಟೇ ಒಂದು ಪ್ರಾಂತದ ಆಡಳಿತದಲ್ಲಿ ಬರಬೇಕೆಂದು ನೀವು ಅಪೇಕ್ಷಿಸುತ್ತಿದ್ದೀರಿ. ಇದು ಸಮಂಜಸವೂ, ಸಾಧುವೂ ಆದ ಬೇಡಿಕೆಯೇ ಸರಿ. ಯಾರೂ ಇದಕ್ಕೆ ಸಮ್ಮತವನ್ನಿತ್ತಾರು. ಆದರೆ ಹಿಂದುಸ್ತಾನ ಸ್ವಾತಂತ್ರ್ಯವನ್ನು ಪಡೆದಾಗಲೇ ಕನ್ನಡಿಗರ ಈ ಬೇಡಿಕೆ ಕಾರ್ಯರೂಪಕ್ಕೆ ಇಳಿಯಲು ಮಾತ್ರ ಸಾಧ್ಯ. ಬ್ರಿಟಿಶರು ಇಲ್ಲಿರುವಷರೆಗೂ ಈಗಿನ ಪ್ರಾಂತಗಳಲ್ಲಿ ಇನ್ನೇನೂ ವ್ಯತ್ಯಾಸ ವಾಗಲಾರದು.

ಭರತ ವರುಷದ ಬಿಡುಗಡೆಯ ಹೋರಾಟದಲ್ಲಿ ಕರ್ನಾಟಕ ಮಹತ್ವದ ಪಾತ್ರವನ್ನು ವಹಿಸಿದೆ. ಸ್ವತಂತ್ರ ಹಿಂದೂದೇಶ ಇದನ್ನು ಮರೆಯಲಾರದು. ತಮ್ಮ ಅಧಿಕಾರ ಬಲದಿಂದ ಸಿಕ್ಕಸಿಕ್ಕ ಹಾಗೆ ಪ್ರಾಂತಗಳನ್ನು ನಿರ್ಮಿಸಿ ಭಾಷೆಗಳ ಮೇಲೆ ಬ್ರಿಟಿಶರು ಮಾಡಿದ ದಬ್ಬಾಳಿಕೆಯನ್ನು ನಿರ್ಮೂಲನ ಗೊಳಿಸಿ ಕೂಡಲೆ ಭಾಷಾವಾರ ಪ್ರಾಂತರಚನೆಯನ್ನು ಮಾಡುವುದೇ

ಸ್ವತಂತ್ರ ಹಿಂದೂ ದೇಶದ ಪ್ರಥಮ ಕರ್ತವ್ಯವಾಗುವಲ್ಲಿ ನನಗೆ ಸಂದೇಹವೇ ಇಲ್ಲ. ಪ್ರಗತಿ ಪಥದಲ್ಲಿ ನಡೆಯ ಬಯಸಿದ ಹಿಂದುಸ್ತಾನವು ಭಾಷಾನು ಗುಣ ಪ್ರಾಂತಗಳನ್ನು ರಚಿಸಲೇ ಬೇಕಾಗುವದು. ೧೯೨೦ರಂದು ನಾಗಪುರ ಅಧಿವೇಶನದ ಸಮಯದಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ಸು ಅಂಗೀಕರಿಸಿದ ಘಟನೆಯು ತನ್ನ ಮೊದಲನೆಯ ಕಲಮಿನಲ್ಲಿಯೇ ಭಾಷೆಯ ತಳಹದಿಯಮೇಲೆ ಪ್ರಾಂತಗಳನ್ನು ವಿಂಗಡಿಸಬೇಕೆಂಬ ತತ್ವವನ್ನು ಒಪ್ಪಿಕೊಂಡಿತು !

ನಾನು ನಿಮಗೆ ಮಾತು ಕೊಡುತ್ತೇನೆ. ಇನ್ನು ಬಹಳದಿನ ಆಗಲಾರದು. ಕರ್ನಾಟಕ ಪ್ರಾಂತ ನಿರ್ಮಾಣದ ಸಮಯವು ಸನ್ನಿಹಿತ ವಾಗಿದೆ. ಹರಿದು ಹಂಚಿ ಹೋದ ಕನ್ನಡ ನಾಡು ಒಂದಾಗುವದು. ಅದಕ್ಕೊಂದು ವಿಶ್ವವಿದ್ಯಾಲಯವಾಗುವದು. ಅದರ ಛತ್ತರಿಗೆಯಡಿಯಲ್ಲಿ ಸ್ವಾಭಿಮಾನ ಪೂರ್ಣ ಬದುಕು ಹುಲುಸಾಗಿ ಬೆಳೆಯುವುದೆಂಬ ಭರವಸೆ ಯನ್ನು ಇಗೋ ಕೊಡುತ್ತೇನೆ."

ಸರದಾರರ ಈ ಭಾಷಣದ ಪ್ರತಿಯನ್ನು ಓದಿ ಮುಗಿಸುವ ಹೊತ್ತಿಗೇ ನಿಜಲಿಂಗಪ್ಪನವರು ತಮಗೆ ಕಾಂಗ್ರೆಸ್ಸಿನ ಅಧ್ಯಕ್ಷರಾದ ಶ್ರೀ ಬಾಬೂ ರಾಜೇಂದ್ರ ಪ್ರಸಾದರಿಂದ ಬಂದ ಓಲೆಯೊಂದನ್ನು ಕೈಗಿತ್ತರು. ಅದು ೧೯೪೮, ಫೆಬ್ರುವರಿ ತಿಂಗಳಿನ ಒಂಬತ್ತನೆಯ ತಾರೀಖಿನ ದಿನ ಬರೆದ ಕಾಗದ. ಕನಾಟಕ ಪ್ರಾಂತಿಕ ಕಾಂಗ್ರೆಸ್ ಕಮೀಟಿಯ ಪ್ರತಿನಿಧಿಗಳನ್ನೊಳಗೊಂಡ ಸಮಿತಿಯೊಂದು ನಿಜಲಿಂಗಪ್ಪನವರ ನೇತೃತ್ವದಲ್ಲಿ ವರ್ಕಿಂಗ ಕಮೀಟಿಯ ಸದಸ್ಯರನ್ನು ಅಷ್ಟರಲ್ಲಿ ಸಂದರ್ಶಿಸಿ ಬಂದಿತ್ತು. ತಮ್ಮ ಉತ್ತರದ ಕಾಗದದಲ್ಲಿ ಅಧ್ಯಕ್ಷ ಪ್ರಸಾದಜೀ ಹೀಗೆ ಬರೆದಿದ್ದರು.

"ಕಾಂಗ್ರೆಸ್ಸು ಭಾಷಾನುಗುಣ ಪ್ರಾಂತ ರಚನೆಯ ತತ್ವವನ್ನು ಒಪ್ಪಿ ಕೊಂಡ ಸಂಗತಿ ನಿಮಗೆ ತಿಳಿದೇ ಇದೆ. ಕಾಂಗ್ರೆಸ್ಸಿನ ಘಟನೆಯು ಈ ವಿಷಯವನ್ನೊಳಗೊಂಡಿದೆ. ಆದುದರಿಂದ ಈ ಬಗೆಗೆ ಕಾಂಗ್ರೆಸ್ಸಿನ ಅಭಿಪ್ರಾಯವೇನಿದೆಯೆಂಬುದನ್ನು ತಿಳಿಸುವ ಅಗತ್ಯವೇ ಇಲ್ಲ.

ಭಾಷಾವಾರ ಪ್ರಾಂತ ರಚನೆಯ ಕಾರ್ಯವನ್ನು ನಿರ್ವಹಿಸುವ ಹೊಣೆ ಸರಕಾರಕ್ಕೆ ಸೇರಿದುದಾಗಿದೆ. ಆಡಳಿತ ವರ್ಗದ ಸೌಕರ್ಯವನ್ನು

ಮನದಂದು ಸರಕಾರವೂ, ಘಟನಾ ಸಭೆಯೂ ಈ ದಿಶೆಯಲ್ಲಿ ಕಾರ್ಯವನ್ನು ಮುಂದುವರಿಸಬೇಕಾಗುವದು. ಕರ್ನಾಟಕಕ್ಕೆ ಅನ್ಯಾಯವೇನೂ ಆಗ ಬೇಕಾದುದಿಲ್ಲ. ಘಟನಾಸಭೆಯೂ, ಸರಕಾರವೂ ಅಂತ ಅನ್ಯಾಯ ವಾಗದಂತೆ ಖಂಡಿತ ನೋಡಿಕೊಳ್ಳುವವು"

ಮುಖ್ಯ ಪ್ರಧಾನಿ ಪಂಡಿತ ನೆಹರುರವರೂ ನಿಜಲಿಂಗಪ್ಪನವರಿಗೆ ಇದೇ ಮಾತು ಹೇಳಿದರಂತೆ ! ಕರ್ನಾಟಕಕ್ಕೆ ಅನ್ಯಾಯವಾಗಲಾರದಂತೆ !

"ಇಷ್ಟೆಲ್ಲ ವಾಗ್ದಾನಗಳಿದ್ದರೂ ಕಾಂಗ್ರೆಸ್ ವರಿಷ್ಠ ಮಂಡಲಿಯು ತನ್ನ ಮಾತನ್ನು ತಾನೇ ಹೇಗೆ ನುಂಗಿ ನೀರು ಕುಡಿಯಿತು ? ಒಂದಿಷ್ಟು ಕಾರಣ ಹೇಳಬಲ್ಲಿರಾ ?" ಎಂದು ನಾನು ನಿಜಲಿಂಗಪ್ಪನವರಿಗೆ ಪ್ರಶ್ನಿಸಿದಾಗ ಉತ್ತರ ಬಂದದ್ದು ಹೀಗೆ.

"ನೀವು ನನ್ನನ್ನು ಪೇಚಿಗೆ ಹಾಕುತ್ತಿದ್ದೀರಿ " ಎಂದು ಅಂದರು.

ಪುನಃ ನಾನು ಅವರಿಗೆ ಒತ್ತಾಯ ಪಡಿಸಲಿಲ್ಲ. ಆದರೆ ಅವರ ಮನಸ್ಸಿನಲ್ಲಿ ನಡೆದ ವಿಚಾರದ ಹೊನಲಿನ ಅರ್ಥ ನನಗಾಗುತ್ತಲಿತ್ತು. ನಾನು ಕೇಳಿದ ಪ್ರಶ್ನೆಯನ್ನೇ ತಿರು ತಿರುಗಿ ತಮ್ಮನ್ನೇ ತಾವು ಪ್ರಶ್ನಿಸಿ ಕೊಂಡು ಉತ್ತರವನ್ನು ಹುಡುಕುವಂತೆ ತೋರುತ್ತಿತ್ತು.

ನಿಜಲಿಂಗಪ್ಪನವರು ಕೈಕೊಂಡ ಕಾರ್ಯವೇ ಅಂತಹದು. ಯಾರೂ ಅದಕ್ಕೆ ಆಸೆಮಾಡಲಾರರು. ಮುಂಬರುವ ಕೆಲವು ವಾರಗಳು ಅವರ ಪಾಲಿಗೆ ಕಾರ್ಗಾಲದ ದಿನಗಳೇ ಸರಿ. ಕನ್ನಡಿಗರಿಗೂ ಅಷ್ಟೇ. ಶಕ್ತಿಯನ್ನು ಸಂಚಯಿಸಿಕೊಂಡು ನಿಜಲಿಂಗಪ್ಪನವರು ನೀರಿಗಿಳಿಯಬೇಕಾಗುವುದು. ಕನ್ನಡಿಗರ ವಿಶಾಲ ಹೃದಯ ಸಮುದ್ರದಲ್ಲಿ ಎದ್ದಿರುವ ಬಿರುಗಾಳಿಯ ಮಧ್ಯೆ ಶಾಂತಿ ದೇವಿಯ ನೌಕೆಯನ್ನು ನಿಷ್ಠಾವಂತ ಕಪ್ತಾನನಂತೆ ಅವರು ನಡಸಿಕೊಂಡು ಹೋಗುವ ಕಾರ್ಯಕ್ಕೆ ಅಣಿಯಾಗಬೇಕಾಗುವುದು.

ದೇವರೇ ಅವರನ್ನು ಕಾಪಾಡಬೇಕು. ಒಳ್ಳೆಯ ಮನುಷ್ಯ, ಜನತೆಯ ಕಲ್ಯಾಣಕ್ಕಾಗಿ ಕಂಕಣ ಕಟ್ಟಿದ ವೀರಯೋಧ. ನಾನು ಅವರನ್ನು ಅವರ ಪಾಲಿಗೇ ಬಿಟ್ಟುಕೊಟ್ಟು ನಮಸ್ಕಾರ ಹೇಳಿ ತಿರುಗಿ ಬಂದೆ. ಮುಂದೆ ವಿಶಾಲ ವಾದ ಸಮುದ್ರವಿತ್ತು. ಕಾರ್ಗಾಲದ ದಿನಗಳಿದ್ದವು. ಅಪರಂಪಾರವಾದ ಸಮು ದ್ರದ ಮಧ್ಯೆ ದಿನದಿನಗಳನ್ನು ಕಳೆದು ಮುಂದಕ್ಕೆ ಕರೆದೊಯ್ಯುವ ಮಾರ್ಗವನ್ನು ಹುಡುಕುವದಕ್ಕೆಂದು ನಿಜಲಿಂಗಪ್ಪ ಆಗಲೇ ಚಿಂತಾಮಗ್ನರಾಗಿದ್ದರು !

# ಅಡಕೊತ್ತಿನಲ್ಲಿಯ ಅಡಿಕೆ !

ಹುಬ್ಬಳ್ಳಿ ಕರ್ನಾಟಕದ ಹೃದಯ, ವಾಣಿಜ್ಯದ ಕೇಂದ್ರ. ಸಾಂಸ್ಕೃತಿಕ ದೃಷ್ಟಿಯಿಂದ, ರಾಜಕೀಯ ಹಾಗೂ ಶೈಕ್ಷಣಿಕ ದೃಷ್ಟಿಯಿಂದ ಅದು ಮಹತ್ವದ ಕಾರ್ಯಗಳನ್ನೆಸಗುತ್ತ ಬಂದಿದೆ. ಹುಬ್ಬಳ್ಳಿಯ ಜೀವನ ಗತಿಯೇ ವಿಚಿತ್ರ. ಬಡವರೂ ಅಷ್ಟೇ, ಶ್ರೀಮಂತರೂ ಅಷ್ಟೇ, ಇಬ್ಬರ ಊಟದಲ್ಲಿ ಹೇಳಿಕೊಳ್ಳುವ ಬದಲಾವಣೆ ಏನೂ ಇಲ್ಲ. ಕೈ ಬೆರಳಿನಿಂದ ಎಣಿಸುವಷ್ಟು ಶ್ರೀಮಂತರು ಮಾತ್ರ ನೆಲದಲ್ಲಿ ಹಣ ಹುಗಿದಿದ್ದಾರೆ. ಕರ್ನಾಟಕದ ಹೃದಯ ಸ್ಪಂದನವನ್ನು ಅರಿತುಕೊಳ್ಳಬಯಸುವವರು ಹುಬ್ಬಳ್ಳಿಯ ನಾಡಿ ಪರೀಕ್ಷೆ ಮಾಡಿದರೆ ಸಾಕು !

ನಗರ ಪಿತಾಮಹರು ಊರನ್ನು ಮರೆತು ಬಿಟ್ಟಿದ್ದಾರೆ. ಬೀದಿಗಳು ಕೆಟ್ಟಿವೆ. ಚರಂಡಿಗಳು ಪಾಪ ಕೂಪಗಳಾಗಿವೆ. ರಸ್ತೆಗಳಲ್ಲಿ ದೀಪದ ಕಂಬಗಳಿಲ್ಲ.

ಆದರೂ ಹುಬ್ಬಳ್ಳಿ ಹೊಸ ರಾಜಕೀಯ ವಿಚಾರಗಳ ತವರುಮನೆ. ನಾಡಿನ ಮುನ್ನಡೆಯ ವಿಚಾರ ಮೊದಲು ಇಲ್ಲಿಯೇ ಆಗಬೇಕು. ಇವತ್ತು ಹುಬ್ಬಳ್ಳಿ ಮಾಡಿದ ವಿಚಾರಗಳನ್ನು ನಾಳೆ ಕರ್ನಾಟಕ ಹಿಂಬಾಲಿಸುತ್ತದೆ.

ಕರ್ನಾಟಕದ ರಾಜಧಾನಿಯೆಂದೆನ್ನಿಸಿಕೊಳ್ಳಬಹುದಾದ ಈ ಊರಿಗೆ ಇವತ್ತು ವಿಚಾರವೊಂದೇ ಒಂದು ! ಏಕೀಕೃತ ಕರ್ನಾಟಕವೇ ಅದರ ಕನಸು. ಅದನ್ನು ಬಿಟ್ಟರೆ ಇನ್ನೊಂದು ವಿಚಾರ ಹುಬ್ಬಳ್ಳಿಗಿಲ್ಲ. ಚಹಾದ ಅಂಗಡಿಗಳಲ್ಲಿ, ಸಿನಿಮಾ ಮಂದಿರಗಳಲ್ಲಿ, ಬಸ್ ನಿಲ್ದಾಣ, ರೈಲು ನಿಲ್ದಾಣಗಳಲ್ಲಿ, ಎಲ್ಲಿ ಹೋದಲ್ಲಿ ಜನತೆ ಕರ್ನಾಟಕದ ಏಕೀಕರಣವನ್ನು ಕುರಿತು ಚರ್ಚೆಮಾಡುವುದನ್ನು ನೀವು ಕಾಣುವಿರಿ.

ಜನತೆ ಪ್ರಗತಿ ಶೀಲರು, ನ್ಯಾಯ ನಿಷ್ಠುರರು. ವಿಚಾರ ವಾದಿಗಳು. ಈ ದಿಶೆಯಲ್ಲಿ ಅವರು ನಾಯಕರಿಗಿಂತಲೂ ನಾಲ್ಕು ಹೆಜ್ಜೆ ಮುಂದು. ಕರ್ನಾಟಕವಿಂದು ಉತ್ಸಾಹೀ ತರುಣರ, ಆದರ್ಶ ನಾಯಕರ ಮಾರ್ಗ ದರ್ಶನಕ್ಕಾಗಿ ಹಂಬಲಿಸಿ ನಿಂತಿದೆ. ಈಗಿನ ಮುಂದಾಳುಗಳು ಎಲ್ಲಿಯೋ

ಸೋತು ನಿಂತಿದ್ದಾರೆಂಬುದರ ಅರಿವು ನಾಡಿಗೆ ಆಗಿದೆ. ಅವರೀಗ ತಮ್ಮ ಹೊಣೆಗಾರಿಕೆಯನ್ನು ಕೆಳಗಿರಿಸಿ ನಮಸ್ಕಾರಮಾಡಿ ಉತ್ಸಾಹೀ ಯುವಕರ ಕೈಯಲ್ಲಿ ಕಾರ್ಯದ ಸೂತ್ರಗಳನ್ನು ಕೊಟ್ಟು ಹೋಗಬೇಕೆಂದು ನಾಡಗೆ ನಾಡೇ ಬಯಸುತ್ತಿದೆ. ಗದಗಿನಲ್ಲಿ ಕೂಡಿದ ಕ. ಪ್ರಾಂ. ಕಾಂಗ್ರೆಸ್ ಸಮಿತಿಯೇ ಈ ಮಾತಿಗೆ ಸಾಕ್ಷಿ. ನಾಯಕರಿಗೆ ನಮಸ್ಕಾರ! ಏನು ವೈಷಮ್ಯ, ಏನು ಭಿನ್ನಾಭಿಪ್ರಾಯ! ನಾಡು ಏಕ ಕಂಠದಿಂದ ಏಕೀಕರಣ ಬೇಡಿಕೆಯನ್ನು ಮಂಡಿಸುತ್ತಿರುವ ಜಾವದಲ್ಲಿ ಮುಂದಾಳುಗಳು ತೋರುತ್ತಿರುವ ದೌರ್ಬಲ್ಯದ ಚಿಹ್ನಗಳು ಏನು ?

ಡಿಂಬಿಗೆ ಒರಗಿಕೊಂಡು 'ಯುವಕರು ಎಲ್ಲಿದ್ದಾರೆ ? ಬರಲಿ' ಎಂದು ಮೂದಲಿಸುವ ಧ್ವನಿ ಅಯೋಗ್ಯ, ಅಪ್ರಾಸಂಗಿಕ, ಕರ್ನಾಟಕದಲ್ಲಿಂದು ಮೂರು ಪಕ್ಷಗಳು ಇವೆ (೧) ಲಿಂಗಾಯತರು (೨) ಬ್ರಾಹ್ಮಣರು (೩) ಬ್ರಾಹ್ಮಣೇತರರು. ಇವರಲ್ಲಿ ಲಿಂಗಾಯತರ ಸಂಖ್ಯೆ ಶೇಕಡ ೧೯ ರಷ್ಟು, ಬ್ರಾಹ್ಮಣರದು ಐದರಷ್ಟು, ಬ್ರಾಹ್ಮಣೇತರರದು ೭೬ ರಷ್ಟು ಇದೆ. ಇದರಿಂದ ಕರ್ನಾಟಕದಲ್ಲಿ ಯಾರ ಸಂಖ್ಯೆ ಅಧಿಕವಾಗಿದೆಯೆಂಬುದು ಸಹಜವಾಗಿ ತಿಳಿದು ಬರುವದು.

ಲಿಂಗಾಯತರ ಪಕ್ಷ ಸುವ್ಯವಸ್ಥಿತವಾಗಿದೆಯೆಂಬ ಮಾತು ನಿಜ. ಬ್ರಾಹ್ಮಣರ ಪಕ್ಷವೊಂದನ್ನು ಬಿಟ್ಟರೆ ಇನ್ನುಳಿದವರಿಗಿಂತಲೂ ಅವರು ಮುಂದುವರೆದಿರುವರು. ಅವರು ಪ್ರಾರಂಭಿಸಿದ ಶಿಕ್ಷಣ ಸಂಸ್ಥೆಗಳೇ ಕರ್ನಾಟಕದ ಶಿಕ್ಷಣ ಪ್ರಪಂಚದ ಜೀವ ಜೀವಾಳ. ಲಿಂಗಾಯತರಿಂದ ಸಂಸ್ಥಾಪಿತವಾಗಿ ಲಿಂಗಾಯತರ ನೇತೃತ್ವದಲ್ಲಿ ಮುನ್ನಡೆಯುತ್ತಿರುವ ಶಿಕ್ಷಣ ಸಂಸ್ಥೆಗಳೇ ಕರ್ನಾಟಕದ ಧನ, ದೌಲತ್ತು. ಬಹು ಮಟ್ಟಿಗೆ ಅವರು ವಾಣಿಜ್ಯದ ಸೂತ್ರಗಳನ್ನೂ ಹಿಡಿದು ನಾಡ ಪ್ರಗತಿಗೆ ಕಾರಣವಾಗಿದ್ದಾರೆ. ಜನತೆಯ ಮನಸ್ಸಿನಲ್ಲಿ ಏಕೀಕರಣದ ಕನಸನ್ನು ಅವರೇ ಮೂಡಿಸಿರುವರು. ಕರ್ನಾಟಕ ವಣಿಕ ಸಂಘದಲ್ಲಿಯೂ ಸ್ಥಳಿಕ ರಾಜಕೀಯ ಸಂಸ್ಥೆಗಳಲ್ಲಿಯೂ ಅವರಿಗಿರುವ ಪ್ರಾಬಲ್ಯ ಹೆಚ್ಚಿನದು. ಒಂದು ಮಾತಿನಲ್ಲಿ ಹೇಳಬಹುದಾದರೆ ಬ್ರಾಹ್ಮಣರನ್ನು ಬಿಟ್ಟರೆ ಕರ್ನಾಟಕದಲ್ಲಿ ಅವರು ಸೃಜಿಸಿಕೊಂಡಿರುವ ಸ್ಥಾನ ಗುರುತರವಾಗಿದೆ. ಅವರಲ್ಲಿ ಬರಹಗಾರರು ಇದ್ದಾರೆ, ಕವಿಗಳಿದ್ದಾರೆ,

ಕಲಾವಿದರಿದ್ದಾರೆ, ಸಂಗೀತರತ್ನರಿದ್ದಾರೆ, ಮೇಲ್ತರಗತಿಯ ರಾಜಕಾರಣಿಗಳಿದ್ದಾರೆ. ಆಧುನಿಕ ಕರ್ನಾಟಕದ ನಿರ್ಮಾಣ ಕಾರ್ಯದಲ್ಲಿ ಇವರೆಲ್ಲ ಸಲ್ಲಿಸಿದ ಸೇವೆ ಅಪಾರವಾಗಿದೆ. ನಾವು ಕಟ್ಟುವ ಕಾರ್ಯದಲ್ಲಿ ಅವ್ಯಾಹತವಾಗಿ ಹೋರಾಡುತ್ತ ಬಂದಿರುವ ಈ ಬಹು ಜನ ಸಮಾಜವಿಂದು ದುರ್ಬೀನು ಹಚ್ಚಿ ನೋಡಿದರೂ ಸ್ಪಷ್ಟವಾಗಿ ಎದ್ದು ತೋರಲಾರದು. ಆ ಸಣ್ಣ ಗುಂಪೊಂದು—ಬ್ರಾಹ್ಮಣರ ಗುಂಪು- ಹೆದರಿಸಿಕೊಂಡು ತನ್ನ ಜೋಳಿ ಬೇಯಿಸಿಕೊಳ್ಳತೊಡಗಿದೆ.

ಕರ್ನಾಟಕದಲ್ಲಿಯ ಇನ್ನುಳಿದ ಪಂಗಡಗಳಿಗಿಂತ ಬ್ರಾಹ್ಮಣರ ಪಕ್ಷವು ಸಣ್ಣದಿದ್ದರೂ ಬಹಳ ವರುಷಗಳಿಂದ ಈ ನಾಡಿನ ರಾಜಕೀಯ ಸೂತ್ರಗಳನ್ನು ಯಾರ ಕೈಗೂ ಕೊಡದಂತೆ ಭದ್ರವಾಗಿಯೆ ಹಿಡಿದುಕೊಂಡು ಬಂದಿದ್ದಾರೆ. ಇಡೀ ನಾಡಿನಲ್ಲಿಯೇ ಅವರು ಮುಂದುವರೆದವರು. ರಾಜಕೀಯ ಪ್ರಪಂಚದಲ್ಲಿ ಸದಾ ಜಾಗರೂಕತೆ ವಹಿಸುತ್ತ ಬಂದವರಿರುವರು. ಸ್ವಾತಂತ್ರ್ಯಸಂಗ್ರಾಮದಲ್ಲಿ ಮುಂಬಂದು ಹೋರಾಡಿಯೂ ಹೋರಾಡಿದ್ದಾರೆ. ತನ್ಮೂಲಕ ಜನತೆಯ ಪ್ರೇಮಾದರಗಳನ್ನು ಸಂಪಾದಿಸಿದ್ದಾರೆ. ಈ ಪಕ್ಷದ ನೇತಾರರಲ್ಲಿ ಶ್ರೀ. ರಂ. ರಾ. ದಿವಾಕರ, ನಾ. ಸು. ಹರಡೀಕರ, ಡಾ. ವ್ಹಿ. ಕೆ. ಆರ್. ವಿ. ರಾವ್, ದ. ಪ. ಕರಮರಕರ ಮುಂತಾದವರೇ ಪ್ರಮುಖರು.

ರಾಜಕೀಯ ಪ್ರಪಂಚದಲ್ಲಿ ಲಿಂಗಾಯತರು ಸುಸಜ್ಜಿತರಾಗಿ ಮುಂದೆ ಬಂದೊಡನೆಯೆ ಬ್ರಾಹ್ಮಣರು ಯೋಚನೆಗೀಡಾದರು. ಅಲ್ಲಿ ತಮ್ಮ ಹಿತವನ್ನು ಪ್ರಸ್ಥಾಪಿಸುವುದಕ್ಕೋಸುಗ ಬ್ರಾಹ್ಮಣೇತರರ ಮೇಲೂ, ವೀರಶೈವೇತರರ ಮೇಲೂ ಪ್ರಾಬಲ್ಯವನ್ನು ಬೀರುವುದಕ್ಕೆ ಪ್ರಯತ್ನಿಸ ತೊಡಗಿದರು. ಸ್ಪಷ್ಟವಾಗಿ ಹೇಳಬೇಕಂದರೆ ಕರ್ನಾಟಕದಲ್ಲಿ ಲಿಂಗಾಯತ ಮತ್ತು ಬ್ರಾಹ್ಮಣರ ನಡುವೆ ತುರುಸಿನ ಸ್ಪರ್ಧೆಯೇ ಇದೆ !

ಇವರಿಬ್ಬರ ನಡುವೆ ಬ್ರಾಹ್ಮಣೇತರರ ಪಕ್ಷವು ನಿಂತು ಕೊಂಡಿದೆ. ಕರ್ನಾಟಕದ ರಾಜಕೀಯ ಭವಿತವ್ಯ ಕೊನೆಯಲ್ಲಿ ಇವರ ಆಸರೆಯನ್ನೇ ಹೊಂದುವಂತೆ ತೋರುತ್ತದೆ. ಬ್ರಾಹ್ಮಣೇತರರು ಬ್ರಹ್ಮಸಂಖ್ಯಾಕರಾಗಿದ್ದರೂ ಶೈಕ್ಷಣಿಕ ಹಾಗೂ ರಾಜಕೀಯ ದೃಷ್ಟಿಯಿಂದ ಹಿಂದುಳಿದವರಾಗಿದ್ದಾರೆ.

ಹೆಚ್ಚಾಗಿ ಈ ವರ್ಗ ಒಕ್ಕಲುತನವನ್ನೇ ಅವಲಂಬಿಸಿದೆ. ಆದರೆ ಏಕೀಕರಣ ಚಳವಳಿಯ ಗಾಳಿ ಪ್ರಬಲವಾಗಿ ಬೀಸತೊಡಗಿದಂದಿನಿಂದ ಇವರೂ ಕೂಡ ಮೂಡಲಿರುವ ಏಕೀಕೃತ ಕರ್ನಾಟಕದಲ್ಲಿ ತಮ್ಮ ಸ್ಥಾನವೇನೆಂಬುದನ್ನು ಜಪ್ಪಿಸಿಕೊಂಡು ಮೆಲ್ಲ ಮೆಲ್ಲನೆ ಮುಂದಕ್ಕೆ ಬರತೊಡಗಿದ್ದಾರೆ. ಕರ್ನಾಟಕ ದಲ್ಲಿಂದು ತಲೆಯೆತ್ತಿರುವ ಜಾತೀಯತೆಯ ಬಲವಾದ ಕಟ್ಟು ನಿಟ್ಟುಗಳು ಅವರ ಮನಸ್ಸನ್ನು ಕದಲಿಸಿವೆ. ತತ್ಪರಿಣಾಮವಾಗಿ ಬ್ರಾಹ್ಮಣೇತರರು ಬ್ರಾಹ್ಮಣರನ್ನು ಸಂದೇಹದ ದೃಷ್ಟಿಯಿಂದ ನೋಡುತ್ತಲಿದ್ದಾರೆ. ಬ್ರಾಹ್ಮಣರಿಗಿಂತ ಲಿಂಗಾಯತರ ಮೇಲೆ ಅವರಿಗೆ ವಿಶ್ವಾಸ ಹೆಚ್ಚು. ಬ್ರಾಹ್ಮಣೇತರರು ಸಂಶಯ ದೃಷ್ಟಿಯಿಂದ ಬ್ರಾಹ್ಮಣರನ್ನು ಹೇಗೆ ನೋಡುತ್ತಿದ್ದಾರೆ. ಲಿಂಗಾಯತರೂ ಕೂಡ ಬ್ರಾಹ್ಮಣ ಸಮಾಜದ ಸಂಕುಚಿತ ದೃಷ್ಟಿಯನ್ನು ಕಂಡು ಅವರನ್ನು ನಂಬಲಾರದವರಾಗಿದ್ದಾರೆ. ತಾವು ಬಹು ಸಂಖ್ಯಾಕರರಾಗಿರುವದರಿಂದ ಸ್ಥಾಪಿತವಾಗಲಿರುವ ಏಕೀಕೃತ ಕರ್ನಾಟಕದಲ್ಲಿ ತಮಗೆ ಸರಿಸಮವಾದ ಅಧಿಕಾರವಿರಬೇಕಾದುದು ನ್ಯಾಯ ಸಮ್ಮತವೆಂದು ಬ್ರಾಹ್ಮಣೇತರರು ಅನ್ನುತ್ತಲಿದ್ದಾರೆ. ಇಷ್ಟು ದಿನಗಳ ವರೆಗೆ ಶೋಷಣೆಗೆ ತುತ್ತಾಗಿ, ರಾಜಕೀಯ, ಶೈಕ್ಷಣಿಕ ದೃಷ್ಟಿಯಿಂದ ಹಿಂದೆ ಬಿದ್ದಿರುವ ಈ ಸಮಾಜ ತನ್ನ ಹಕ್ಕು ಬಾಧ್ಯತೆಗಳನ್ನು ಈ ಸಮರ್ಥ ಪಂಗಡಗಳ ಇದಿರು ನಿಂತು ಹೇಗೆ ಕಾಪಾಡಿಕೊಳುವುದೋ ನೋಡಬೇಕು !

ಬ್ರಾಹ್ಮಣೇತರರಲ್ಲೂ ಅನೇಕ ಪಂಗಡ ಒಳಪಂಗಡಗಳಿವೆ. ಅದರಲ್ಲಿ ಸುವ್ಯವಸ್ಥಿತವಾದ ಸಂಘಟನೆಯೆ ಇಲ್ಲ. ಅವರಿಗೆ ಇರುವ ಒಂದೇ ಒಂದು ಅಂಜಿಕೆಯೆಂದರೆ ಇದು. ಬ್ರಾಹ್ಮಣರೂ, ಲಿಂಗಾಯತರೂ, ಬಹು ಸಂಖ್ಯಾಕರಾದ ತಮ್ಮ ಮೇಲೆ ನಡಸಬಹುದಾದ ಅಧಿಕಾರದ ಅಂಜಿಕೆಯೊಂದೇ ಅವರಿದಿರಿಗಿರುವ ಒಮ್ಮತದ ವಿಚಾರ !

ರಾಜಕೀಯದ ಅಧಿಕಾರದ ದಾಹಕ್ಕೆ ಈಡಾಗಿ ಬ್ರಾಹ್ಮಣೇತರರ ಪಂಗಡದಲ್ಲಿ ಇಬ್ಬಣಗಳಾಗಿ, ಅದರಲ್ಲೊಂದು ಬ್ರಾಹ್ಮಣರ ಪಕ್ಷವನ್ನೂ, ಇನ್ನೊಂದು ಲಿಂಗಾಯತರ ಪಕ್ಷವನ್ನೂ ಹಿಡಿಯಬಹುದೆಂದು ಊಹಿಸುವುದಕ್ಕೆ ಸಾಕಷ್ಟು ಕಾರಣಗಳಿಲ್ಲದೆ ಇಲ್ಲ. ಅಂತ ಇಬ್ಬಣ ಗಳೇನಾದರೂ ಆದದ್ದೇ ನಿಜವಾದರೆ ಬ್ರಾಹ್ಮಣರು ಕೆಲಸ ಸಾಧಿಸುತ್ತಾರೆ.

ಲಿಂಗಾಯತರ ಪಕ್ಷ ಅಷ್ಟು ಪ್ರಬಲವಾಗುಳಿಯಲಾರದು. ಅದರಿಂದ ಅವರು ಬಯಸಿದ ರಾಜಕೀಯ ಗುರಿ ಸಾಧಿಸಲಾರದು.

ಕರ್ನಾಟಕದ ಅಲ್ಪ ಸಂಖ್ಯಾಕರಾದ ಬ್ರಾಹ್ಮಣ ಸಮಾಜ ಏಕೀಕರಣದ ಕನಸು ಕನಸಾಗಿಯೇ ಉಳಿಯುವಂತೆ ಮಾಡಲು ಹೋರಾಡಬಹುದು. ಕನ್ನಡ ನಾಡು ಒಂದಾದರೆ ತಮಗೆ ಏಳ್ಗೆಯಿಲ್ಲವೆಂದೂ, ಕರ್ನಾಟಕದ ಏಕೀಕರಣದ ದಿನವೇ ತಮ್ಮ ಅಳಿಗಾಲದ ಪ್ರಾರಂಭವೆಂದೂ ಅವರು ತಿಳಿದು ಕೊಂಡಹಾಗೆ ಕಾಣಿಸುತ್ತಿದೆ.

ಆದರೂ ಅಲ್ಪ ಸಂಖ್ಯಾಕರ ಪಕ್ಷವೊಂದು ಏಕೀಕರಣಕ್ಕಾಗಿ ಅವ್ಯಾಹತವಾಗಿ ಹೋರಾಡುತ್ತಲಿದೆ. ತಮ್ಮ ಸ್ವಾರ್ಥಕ್ಕಾಗಿ ಇನ್ನೊಬ್ಬರಿಗೆ ಅಹಿತ ಬಗೆಯುವುದು ಅಪರಾಧವೆಂದೂ ಅವರು ನಂಬಿದ್ದಾರೆ. ರಾಜಕೀಯ ಅಧಿಕಾರದ ಕೇಂದ್ರೀಕರಣಕ್ಕಾಗಿ ಒಡಿದಾಡುವ ಕಾಲ ಇದು ಅಲ್ಲ. ಜಾತಿ ಮತಗಳು ಏನೇ ಇರಲಿ ಸಮಸ್ತ ಕನ್ನಡ ಕುಲದ ಕಲ್ಯಾಣದ ಮುಂದೆ ಇದು ಏನೂ ಅಲ್ಲ. ಸುಂದರವಾದ, ಬೃಹತ್ತಮವಾದ ಏಕೀಕೃತವಾದ ಕರ್ನಾಟಕವೇ ಕನ್ನಡ ಕುಲಕೋಟಿಯ ಇಹ ಪರ. ಇದು ಅವರ ಅಭಿಪ್ರಾಯ. ಈ ಅಭಿಪ್ರಾಯವನ್ನು ಮನ್ನಿಸದವರು ಯಾರು ?

---

# ತೆರೆಯ ಮರೆಯಲ್ಲಿ !

ಕಪ್ಪು ಪರದೆ ಸರಿಯುತ್ತಲಿದೆ. ಭವಿಷತ್ತಿನ ಚಿತ್ರ ಮುಸಕು ಮುಸಕಾಗಿ ಕಾಣಿಸುತ್ತಲಿದೆ. ಪ್ರತಿಗಾಮಿಗಳು ತಲೆಯೆತ್ತುತ್ತಲಿದ್ದಾರೆ. ಕ. ಪ್ರಾಂ. ಕಾಂಗ್ರೆಸ್ಸಿನ ನಿಲವನ್ನು ಹಾಳು ಮಾಡಿ ಹೈ ಕಮಾಂಡಿನ ಕಣ್ಣಿನಲ್ಲಿ ತಾವು ದೊಡ್ಡವರಾಗಿ ಕಾಣಿಸಿಕೊಳ್ಳಬೇಕೆಂಬಾಕಾಂಕ್ಷೆಯಿಂದ ಅವರು ಹೊಂಚು ಹಾಕುತ್ತಲಿದ್ದಾರೆ.

ಈ ಪ್ರತಿಗಾಮಿಗಳ ಗುಂಪು ತೀರ ಚಿಕ್ಕದು. ಆದರೂ ಅವರ ಪ್ರಭಾವ ವರ್ತುಲ ದೊಡ್ಡದಿದೆ. ಕರ್ನಾಟಕ ಪ್ರಾಂತ್ಯ ನಿರ್ಮಾಣದ ಪ್ರಶ್ನೆ ಅನಿಯಮಿತ ಅವಧಿಯವರೆಗೆ ಮುಂದಕ್ಕೆ ಹೋಗಲಿ! ಹಾಗೆ ಹೋಗುವಂತೆ ಮಾಡುವಲ್ಲಿ ಶಕುನಿಯ ತಂತ್ರವನ್ನೂ, ಚಾಣಕ್ಯನ ನೀತಿಯನ್ನೂ, ನಾರದನ ಜ್ಞಾನವನ್ನೂ ಅವರು ಉಪಯೋಗಿಸುತ್ತಿದ್ದಾರೆ.

ಇಲ್ಲಿ ಅವರು ಯಶಸ್ವಿಗಳಾದರೆ ಮುಗಿದೇ ಹೋಯಿತು. ಅವರ ಹೊಂಚು ಸಾಧಿಸುತ್ತದೆ. ಕನ್ನಡ ಜನತೆಯ ಆಸೆಯ ಪತಂಗ ಬೆಂಕಿಯಲ್ಲಿ ಬಿದ್ದು ಹೋಗುವುದು. ಆಗ ಪ್ರತಿಗಾಮಿಗಳಿಗೆ ಆಗುವ ಆನಂದ ಹೇಳ ತೀರದು! ಆದರೆ ಎಷ್ಟರ ಮಟ್ಟಿಗೆ ಈ ವಿರೋಧಕ ಶಕ್ತಿಗಳು ಜನಾಭಿಪ್ರಾಯವನ್ನು ಇದಿರಿಸಿ ತಮ್ಮ ಮೂಗನ್ನು ಮೇಲಕ್ಕೆತ್ತಿಕೊಂಡು ಆಡ್ಡಾಡಬಹುದು ಎನ್ನುವುದು ಇನ್ನೊಂದು ವಿಚಾರ!

ಈ ಹೊತ್ತಿನಲ್ಲಿ ಜನತೆಯ ಲಕ್ಷ್ಯ ದಿಲ್ಲಿಯಲ್ಲಿ ಕುಳಿತುಕೊಂಡಿರುವ ದಿವಾಕರರ ಕಡೆಗೆ ತಿರುಗಿದೆ. ಇತ್ತೀಚಿಗೆ ಪತ್ರಿಕೆಗಳಿಗೆ ಅವರು ಕೊಟ್ಟ ಹೇಳಿಕೆಗಳ ಬಗ್ಗೆ ನಾಡಿನಲ್ಲಿ ಬಿರುಸಾಗಿಯೇ ತರ್ಕ ವಿತರ್ಕಗಳು ನಡೆದಿವೆ. ದಿವಾಕರರ ಬಗೆಗೆ ಜನತೆಯಲ್ಲಿ ಮಾತುಕತೆ ಏಳುವುದು ಸಹಜವೇ ಆಗಿದೆ. ಬಹಳ ಕಾಲದಿಂದ ಅವರು ಕರ್ನಾಟಕ ಪ್ರಾಂತ ನಿರ್ಮಾಣವನ್ನು ಕುರಿತು ಹೋರಾಡುತ್ತ ಬಂದಿದ್ದಾರೆ. ಕರ್ನಾಟಕದ ಇನ್ನುಳಿದ ಶಾಸನ ಸಭಾ ಸದಸ್ಯರಂತೆ ಅವರೂ ಏಕೆ ರಾಜೀನಾಮೆಯನ್ನು ಸಲ್ಲಿಸಲು ಅಪ್ಪಣೆ ಬೇಡಲಿಲ್ಲ! ಪತ್ರಿಕೆಗಳಿಗೆ ಕೊಟ್ಟ ಅವರ ಹೇಳಿಕೆಯ ಹಿಂದೆ ಇರಬಹುದಾದ ಧೋರಣೆಯಾದರೂ ಏನು ?

ಹಿಂದುಸ್ತಾನದ ರಾಜಕಾರಣದಲ್ಲಿ ದಿವಾಕರರಿಗೆ ಒಂದು ಹೆಸರು ಇದೆ. ಕನ್ನಡದ ಜನ ಮನದ ಮಧ್ಯೆಯೂ ಅವರಿಗೆ ಗೌರವದ ಸ್ಥಾನವಿದೆ. ಇಂದು ಅವರು ಕೇಂದ್ರ ಸರಕಾರದ ವಾರ್ತಾ ಹಾಗೂ ಚಲನ ಚಿತ್ರ ಶಾಖೆಯ ಮಂತ್ರಿಗಳಾಗಿರುತ್ತಾರೆ. ಅಧಿಕಾರ ವಹಿಸಿಕೊಂಡಂದಿನಿಂದ ಆ ದಿಶೆಯಲ್ಲಿ ಒಳ್ಳೆಯ ಕೆಲಸವನ್ನೂ ಮಾಡಿದ್ದಾರೆ. ಅವರ ಬುದ್ಧಿಮತ್ತೆಯನ್ನು ನಾನು ಗೌರವಿಸುತ್ತೇನೆ. ಕರ್ನಾಟಕದ ಏಳ್ಗೆಗಾಗಿ ಅವರು ವಹಿಸಿದ ಶ್ರಮ ಶ್ಲಾಘನೀಯವಾಗಿಹೆ. ಸ್ವಾತಂತ್ರ್ಯ ಸಮರಾಂಗಣ ದಲ್ಲಿ ಅವರು ವಹಿಸಿದ ಪಾತ್ರ ಮಹತ್ತರವಾದುದು. ನಮ್ಮ ನಾಡಿನ ಇನ್ನುಳಿದ ನಾಯಕರಂತೆಯೆ ಅವರೂ ಕಷ್ಟ ಪಟ್ಟರು. ಗ್ರಂಥಕರ್ತನಾಗಿ, ಶಿಕ್ಷಕನಾಗಿ, ರಾಜಕಾರಣಿಯಾಗಿ ದಿವಾಕರ್ ನಾಡ ಮನದ ಮೇಲೆ ಮರೆಯಲಾರದ ಮುದ್ರೆಯನ್ನೊತ್ತಿದ್ದಾರೆ. ಈ ಕಾರಣದಿಂದ ದಿವಾಕರ್ ಏನು ಹೇಳುತ್ತಾರೆ, ಏನು ಮಾಡುತ್ತಾರೆ ಎನ್ನುವುದನ್ನು ಗಮನಿಸುವುದು ಕನ್ನಡಿಗರ ಕರ್ತವ್ಯವಾಗಿದೆ.

ಪತ್ರಿಕೆಗಳಿಗೆ ಕೊಟ್ಟ ದಿವಾಕರರ ಹೇಳಿಕೆ ಕ. ಪ್ರಾಂ. ಕಾಂ. ಕಾರ್ಯ ವಾಹಕ ಮಂಡಲಿಯ ಮೇಲೆ ಪರಿಣಾಮವನ್ನುಂಟುಮಾಡದೆ ಇರಲಾರದು. ಕರ್ನಾಟಕದ ಸಮಸ್ಯೆಯ ಮೇಲೆ ತಣ್ಣೀರು ಹೊಯ್ದು ಕುಳ್ಳಿರಿಸಬೇಕೆಂದಿರುವ ಹೈಕಮಾಂಡಿನ ಧೋರಣೆಗೆ ಸರಿಯಾಗಿ ನಡೆಯುವಂತೆಕನ್ನಡ ಜನತೆಯನ್ನು ತರಬೇತುಗೊಳಿಸುವ ಇಚ್ಛೆಯಿಂದ ದಿವಾಕರರು ಕೊಟ್ಟ ರಾಜಕೀಯ ಪ್ರಕಟನೆ ಅದು !

ನಿಜವಾಗಿ ಹೇಳಬೇಕೆಂದರೆ ದಿವಾಕರರ ಪ್ರಕಟನೆ ಕಾಲ ಮೀರಿ ಬಂದಿದೆ. ಹುಬ್ಬಳ್ಳಿಯಲ್ಲಿ ಕ. ಪ್ರಾಂ. ಕಾಂಗ್ರೆಸ್ಸು ಕೂಡಿದ ಒಂದು ತಿಂಗಳಾದ ಮೇಲೆ ದಿವಾಕರರು ಇಂತ ಹೇಳಿಕೆಯನ್ನು ಏಕೆ ಕೊಡಬೇಕಾಗಿತ್ತು ? ಈ ತಡವೇಕೆ ? ಅವರಿಗೆ ಏನಾದರೂ ಹೇಳಬೇಕೆಂದಿದ್ದರೆ ಕ. ಪ್ರಾಂ. ಕಾಂಗ್ರೆಸ್ಸು ಐತಿಹಾಸಿಕ ಧೋರಣೆಯನ್ನು ಕೈಕೊಂಡ ಮರುದಿನವೇ ಹೇಳಬಹುದಾಗಿದ್ದಿತು.

ಈಯೊಂದು ತಿಂಗಳಲ್ಲಿ ಸೇತುವೆಯ ಕೆಳಗಡೆ ಬಹಳ ನೀರು ಹರಿದು ಹೋಗಿದೆ. ಅವರ ಮೌನದ ತಪಸ್ಸನ್ನು ಮುರಿದು ಬಂದ ಪ್ರಕಟನೆಯ ಬಾಣ ಏನನ್ನೂ ಮಾಡಲಾರದು.

ದುಡುಕು ಗಂಡಾಂತರಕಾರಿಯಾದೀತು. ಕರ್ನಾಟಕದಲ್ಲಿ ಕಾಂಗ್ರೆಸ್ಸಿನ ಗೋರಿಯನ್ನು ತೋಡೀತು. ಆದರಿಂದ ಏಕೀಕರಣದ ಧ್ಯೇಯವೂ ಅಯಶಸ್ವಿಯಾದೀತು—ಹಾಗೆಂದು ಶ್ರೀ ದಿವಾಕರರ ಹೇಳಿಕೆ. ದಿವಾಕರ್ ಹುಷಾರಿ. ಆದರೆ....? ಕ. ಪ್ರಾಂ. ಕಾಂಗ್ರೆಸ್ಸಾಗಲಿ, ಕರ್ನಾಟಕದ ಶಾಸನ ಸಭಾ ಸದಸ್ಯರಾಗಲಿ ಈ ದುಡುಕಿನಿಂದಾಗಿ ಹೇಗೆ ನಿಂದೆಗೆ ಈಡಾಗುವರು ? ಕರ್ನಾಟಕ ಪ್ರಾಂತ ನಿರ್ಮಾಣಕ್ಕೆಂದು ಹಂಬಲಿಸಿ ನಿಂತ ಕನ್ನಡಿಗರ ಆಶಯದ ಕೂಗು ಅವರನ್ನು ಆ ಕಾರ್ಯಕ್ಕೆ ಅನುಗೊಳಿಸಿದೆ. ಇಲ್ಲಿ 'ದುಡುಕಿ' ನಿಂದಾಗಿ ಏನಾದರೂ ನಿಂದಾಸ್ಪದವಾಗಬಹುದಾದ ಘಟನೆಗಳು ಜರುಗಿದರೆ ಅದಕ್ಕೆ ಹೊಣೆ ಹೈಕಮಾಂಡಿನ ವಿಚಾರರಹಿತ ಧೋರಣೆಯೇ ಕಾರಣವಾಗಬಹುದಲ್ಲದೆ ಇನ್ನೇನು ?

ಬಡೋದೆಯಲ್ಲಿ, ಕೊಲ್ಹಾಪುರದಲ್ಲಿ ಏನು ನಡೆಯಿತೆಂಬುದನ್ನು ಕನ್ನಡಿಗರು ಮರೆಯಲಾರರು. ಬಾಯಿ ಬಡಾಯಿಗಳಿಗೆ ಕಿವಿಗೊಡುವ ಪರಿಸ್ಥಿತಿಯಲ್ಲಿ ಕನ್ನಡಿಗರು ಇಲ್ಲ.

ಯಾರಿಗೂ ಅಂಜದೆ, ಯಾರ ಭಿಡೆ ಮುರವತ್ತುಗಳಿಗೂ ಒಳಗಾಗದೆ ಕಾರ್ಯವನ್ನು ಮುಂದುವರಿಸುವವರಿಂದು ಕರ್ನಾಟಕಕ್ಕೆ ಬೇಕಾಗಿದ್ದಾರೆ. ಕನ್ನಡಿಗರಿಗೆ ಪುರಾಣ ಹೇಳುವ ಪಂಡಿತರು ಬೇಕಾಗಿಲ್ಲ, ಕಾರ್ಯ ಮಾಡಿ ತೋರಿಸುವ ಸೇನಾನಿಗಳು ಬೇಕಾಗಿದ್ದಾರೆ. ಕರ್ನಾಟಕದಲ್ಲಿ ಕಾಂಗ್ರೆಸ್ಸು ಉಳಿಯಬೇಕೆಂದು ದಿವಾಕರ್ ಬಯಸಿದ್ದರೆ ಅವರು ಮನಸ್ಸುಮಾಡಿ ಯುಕ್ತಿಯನ್ನು ಹುಡುಕಲಿ. ಕೀಲಿಯ ಕೈ ಎಲ್ಲಿದೆಯೆನ್ನುವುದು ಅವರಿಗೆ ಗೊತ್ತಿದೆ !

ದಿವಾಕರ್ ಮನಸ್ಸು ಮಾಡಿದರೆ ಬಡೋದೆಯಲ್ಲಿಯೂ, ಕೊಲ್ಹಾಪುರದಲ್ಲಿಯೂ ನಡಿಸಿ ತೋರಿಸಿದಂತಹ 'ಜಾದೂ' ಪ್ರಯೋಗಗಳನ್ನು ಸರದಾರ ಪಟೇಲರು ಇಲ್ಲಿಯೂ ಮಾಡಿ ತೋರಿಸಬಹುದು.

ಈ ಸಮಯದಲ್ಲಿ ಒಂದು ಮಾತು ಹೇಳಿಬಿಡುವುದೇ ಒಳ್ಳೆಯದು. ಕರ್ನಾಟಕದಲ್ಲಿ ಕಾಂಗ್ರೆಸ್ಸಿನ ಪರಿಸ್ಥಿತಿ ನೀರ ಮೇಲಿನ ಗುಳ್ಳೆಯಂತಾಗ ತೊಡಗಿದೆ. ಈಗೋ ಇನ್ನಷ್ಟು ಹೊತ್ತಿಗೋ ಒಡೆದು ಹೋಗಬಹುದಾದ ಈ ಗುಳ್ಳೆಯನ್ನು ನಿಜಲಿಂಗಪ್ಪ ಉಳಿಸಲು ಸಮರ್ಥರಾದಾರೇ೦ದು ನನಗೆ

ಅನ್ನಿಸುವುದಿಲ್ಲ. ಕರ್ನಾಟಕದ ಅಭಿಮಾನಾಸ್ಪದವಾದ ನಾಯಕನಿಗೇ ಈ ಕೆಲಸ ಮಿಕ್ಕಿನಿಂತ ಜೀವದಲ್ಲಿ ಇನ್ನಾರಿಂದಲೂ ಅದು ಸಾಧ್ಯ ವಾದೀತೆಂದು ಹೇಗೆ ಹೇಳುವ ನು ?

ಜೆ. ವಿ. ಪಿ. ವರದಿಯಲ್ಲಿಯ ಕರಾರುಗಳನ್ನು ಪೂರೈಸುವುದಕ್ಕೆ ಹೊಸ ದಾರಿ ತಂತ್ರಗಳನ್ನು ಹುಡುಕುವುದು ಕ್ಷೇಮವೆಂದು ದಿವಾಕರರ ಸೂಚನೆ. ಪ್ರಸ್ತುತ ವಾತಾವರಣದಿಂದ ತಲೆ ತಪ್ಪಿಸಿಕೊಳ್ಳುವವರಿಗೆಲ್ಲ ದುರ್ದೈವದಿಂದ ಜೆ. ವಿ. ಪಿ. ವರದಿಯೇ 'ವೇದೋಪನಿಷತ್ತು' ಆಗಿದೆ.

ಮೈಸೂರು ಸಂಸ್ಥಾನ ಕರಗಬೇಕು. ಆದರೆ ಸ್ವಾರ್ಥ ಲಾಲಸಿಗಳು ಮೈಸೂರಿಗೆ ಇಂತ ಹೊತ್ತು ಬಾರದಂತೆ ಸ್ವರ್ಗಮರ್ತ್ಯ ಪಾತಾಳಗಳನ್ನು ಅಲುಗಿಸದೆ ಬಿಡಲಾರರು. ಸಾಕ್ಷಾತ್ ಪರಮೇಶ್ವರನಿಂದಲೇ ಈ ಕಾರ್ಯ ಆದರೆ ಆಗಬೇಕು. ಮನುಷ್ಯ ಮಾತ್ರರಿಗೇ ಸಾಧ್ಯವಿಲ್ಲವೆಂದ ಮೇಲೆ ದಿವಾಕರರಿಂದ ಏನಾದೀತು ? ಆದರೂ ಸರದಾರರಿಗೆ ಸಾಧ್ಯವಿದೆ.

ಒಮ್ಮೆ ದಾರಿ ಸರಳವಾದರೆ, ಪ್ರತಿಗಾಮಿಗಳ ಉಚ್ಚಾಟನೆಯಾದರೆ ಮೈಸೂರು ಕರ್ನಾಟಕದಲ್ಲಿ ಸಮಾವೇಶವಾದೀತು. ತಪ್ಪುದಾರಿ ಹಿಡಿದು ನಡೆದರೆ ಕೆಲಸ ಹೇಗೆ ಆಗಬೇಕು ? ಜೆ. ವಿ. ಪಿ. ವರದಿಯನ್ನು ಪಠಿಸುತ್ತ 'ಜಾದೂ' ಪ್ರಯೋಗಗಳನ್ನು ಮಾಡಿ ತೋರಿಸಿ ಏಕೀಕೃತ ಕರ್ನಾಟಕವನ್ನು ಕಟ್ಟುವುದಕ್ಕೆ ಆದೀತೆ ?

ಕನ್ನಡಿಗರ ದುರ್ದೈವ ! ಕನ್ನಡ ಕುಲ ಕೋಟಿಯ ಆಸೆ ಆಕಾಂಕ್ಷೆ ಗಳಿಗೆ ತಮ್ಮ ಪ್ರಭಾವದ ಅರೆದಾಳ ಬಡೆದು, ನಾಡ ಮುಖಕ್ಕೆ ಮಸಿ ಬಡಿದು ಕುಳ್ಳಿರಿಸಲು ದಿವಾಕರರು ದಿವಾರಾತ್ರಿ ಎತ್ತುಗಡೆ ಮಾಡುತ್ತಿದ್ದಾರೆ. ಕ. ಪ್ರಾಂ. ಕಾಂಗ್ರೆಸ್ಸಿನ ತೀರ್ಮಾನನ್ನು ಎತ್ತಿ ಹಿಡಿಯುವುದಕ್ಕೆ ಅವರೇ ಮೊದಲಿಗರಾಗಿ ಮುಂಬರಬೇಕಾಗಿದ್ದಿತು.

ಹಾಗನ್ನುವುದಕ್ಕೆ ಕಾರಣವೂ ಇದೆ. ೧೯೨೦ರಿಂದ ದಿವಾಕರ್ ಸಂಯುಕ್ತ ಕರ್ನಾಟಕವನ್ನು ಕಟ್ಟುವ ಕಾರ್ಯದಲ್ಲಿ ಅವಿರತವಾಗಿ ಶ್ರಮಿಸಿದ್ದಾರೆ. ಘಟನಾ ಸಭೆಯಲ್ಲಿ, ಸಾರ್ವಜನಿಕ ಸಭೆಗಳಲ್ಲಿ, ಖಾಸಗೀ ಮಾತು ಕತೆಗಳಲ್ಲಿ ದಿವಾಕರ್ ಓರಂತೆ ಕನ್ನಡ ನಾಡಿನ ಹಿತವನ್ನು ಎತ್ತಿ ಹೇಳುತ್ತಲೇ ಬಂದಿದ್ದಾರೆ. ಆದರೆ....?

ಕೇಂದ್ರದ ಮಂತ್ರಿ ಪದವಿಗೆ ದಿವಾಕರರು ಏರಿದ ಮೇಲೆ ಅವರ ಆದರ್ಶದ ಗೋಪುರ ಕುಪ್ಪಳಿಸಿತು. ಧ್ಯೇಯದ ಕುಡಿ ಕಮರಿತು. ಹುಲಿ ಕುರಿಮರಿ ಆಯಿತು.

ಒಂದು ಮಾತು ಮಾತ್ರ ನಿಜ ! ಕರ್ನಾಟಕ ಎದ್ದಿದೆ, ತಪ್ತವಾಗಿದೆ. ಕರ್ತವ್ಯಚ್ಯುತನಾದ ಕನ್ನಡಿಗನಿಗೆ ಕರ್ನಾಟಕದಲ್ಲಿ ಜಾಗವಿಲ್ಲ. ರಾಜಕಾರಣಿ ದೊಡ್ಡವನಿರಬಹುದು. ಆದರೆ ಕರ್ನಾಟಕದ ಪುಣ್ಯ ಭೂಮಿ ಅವನಿಗಿಂತಲೂ ದೊಡ್ಡದಿದೆ !

---

# ಹೊಸರಿತ್ತಿಯ ಯಾತ್ರೆ

ಹಳ್ಳದ ದಡದ ಹೀರೆಯ ಬಳ್ಳಿಯಂತೆ ಕರ್ನಾಟಕದ ತುಂಬೆಲ್ಲ ಹಳ್ಳಿಗಳೇ ಹಬ್ಬಿಕೊಂಡಿವೆ. ಹಳ್ಳಿಗರೇ ಕರ್ನಾಟಕದ ಸೌಭಾಗ್ಯ. ನನಗೊಂದು ಆಸೆ. ಹಳ್ಳಿಗಳಿಗೆ ಹೋಗಬೇಕು. ಬಡವರನ್ನೂ ಶ್ರೀಮಂತರನ್ನೂ ನೋಡಬೇಕು. ಕಮ್ಮಾರ ಬಡಿಗರನ್ನು ಕಾಣಬೇಕು. ರೈತ ಕೂಲಿ ಕುಂಬಳಿಗಳೊಡನೆ ಮಾತನಾಡಬೇಕು. ಅವರೆಂತು ಕಾಲ ಕಳೆಯುತ್ತಿದ್ದಾರೆ? ಅವರ ವಿಚಾರಗಳೇನು ? ಅವರಿಗೆ ಏನು ಹೇಳಬೇಕಾಗಿದೆ ? ಅದನ್ನೆಲ್ಲ ತಿಳಿದುಕೊಳ್ಳಬೇಕೆಂಬ ಬಯಕೆ ನನ್ನನ್ನು ಬಲವಾಗಿ ಕಾಡುತ್ತಿದ್ದ ಸಮಯದಲ್ಲಿ ಸುಸಂಧಿಯೊಂದು ಬಂದಿತು.

ಹೊತ್ತು ಹೋಗಗೊಡಲಿಲ್ಲ. ಹೊಸರಿತ್ತಿಗೆ ಹೊರಟು ನಿಂತೆ. ಹಿಂದುಸ್ಥಾನದ ಇತರ ಹಳ್ಳಿಗಳಂತೆ ಹೊಸರಿತ್ತಿಯೂ ಒಂದು ಮಾದರಿಯ ಹಳ್ಳಿ. ನಾಗರಿಕತೆಯ ಸೋಂಕಿನಿಂದ ದೂರವಾಗಿ ನಿಂತ ಹೊಸರಿತ್ತಿ ಮುಡಿಯದ ಹೂವಿನಂತಿದೆ. ಅದಕ್ಕೆ ಹತ್ತಿರದಲ್ಲಿ ಇಪ್ಪತ್ತು ಮೈಲಿಗಳಾಚೆ ರೈಲು ನಿಲುದಾಣ ಮಾತ್ರ ಉಂಟು. ಹುಬ್ಬಳ್ಳಿಯಿಂದ ನಾವು ಕಾರಿನಲ್ಲಿ ಹೊರಟೆವು. ದಾರಿಯ ಇಕ್ಕೆಲದಲ್ಲಿ ಕಂಗೊಳಿಸುತ್ತಿರುವ ಹಸಿರು ಗಿಡಗಳ ಮಧ್ಯೆ ಧೂಳಿಯನ್ನು ಎಬ್ಬಿಸುತ್ತ ಮೋಟರು ಓಡುತ್ತಲಿದ್ದಿತು. ಎಡಬಲದಲ್ಲಿ ಹತ್ತಿಯ ಹೊಲಗಳು ತೊಳೆ ಹಿಡಿದು ನಿಂತಿದ್ದವು. ಇದಿರಿನಲ್ಲಿ ಮೇರೆ ಮೀರಿ ನಿಂತ ಕನ್ನಡ ನಾಡಿನ ಫಲವತ್ತಾದ ಭೂಮಿ ಮನ ಮೋಹಕವಾಗಿದ್ದಿತು. ದೂರದೂರದಲ್ಲಿ ಪರ್ವತ ಪಂಕ್ತಿಗಳು ಹಸಿರು ಮಡಿಯನ್ನುಟ್ಟುಕೊಂಡು ಆಗಸಕ್ಕೆ ಆರತಿಯನ್ನೆತ್ತುವ ಮುತ್ತೈದಿಯರಂತೆ ದೃಷ್ಟಿಗೋಚರವಾಗುತ್ತಿದ್ದವು. ಅಲ್ಲಲ್ಲಿ ಹೊಲಗಳಲ್ಲಿ ನೇಸರಿನ ಸುಡು ಬಿಸಲಿನಲ್ಲಿ ನಿಂತುಕೊಂಡು ಒಕ್ಕಲುಮಗ, ಒಕ್ಕಲಗಿತ್ತಿಯರು ಹೊಲದ ಬೆಳೆಯನ್ನು ನಿರೀಕ್ಷಿಸುತ್ತಿದ್ದರು. ತುಂಟ ಬಾಲಕರು ಗೊತ್ತು ಗುರಿಯಿಲ್ಲದೆ ಹೊಲದ ಬದುವುಗಳಲ್ಲಿ ಜಿಗಿದಾಡುತ್ತಿದ್ದರು. ಈಗ ಅವರು ಶಾಲೆಯಲ್ಲಿ ಇರಬೇಕಾದ

ಸಮಯ. ಆದರೆ ಹಳ್ಳಿಯ ಮಕ್ಕಳಿಗೆ ಶಿಕ್ಷಣ ಸೌಕರ್ಯವೇನಿದೆ ? ಅವರು ಓದಿದರೋ, ಬಿಟ್ಟರೋ ಕೇಳುವವರಾರು ?

ವಾಯು ವೇಗದೊಂದಿಗೆ ನಮ್ಮ ಕಾರು ಮುಂದುವರಿಯುತ್ತಿರುವಾಗ ಈ ನೆಲದ ಮಕ್ಕಳು ಹಿಂದಿರುಗಿ ನಮ್ಮನ್ನೆ ಬೆರಗುಗಣ್ಣಿನಿಂದ ನೋಡುತ್ತಿದ್ದರು. ನಗರ ಪಟ್ಟಣಗಳಿಂದ ಬಂದ ನಮ್ಮ 'ನಾಗರಿಕತೆ'ಯನ್ನು ಅವರು ಪ್ರೀತಿಸುತ್ತಿರಬಹುದೇ ಎಂಬ ವಿಚಾರ ಆಗ ನನ್ನ ಮನಸ್ಸಿನಲ್ಲಿ ಸುತ್ತಿ ಸುಳಿಯದೆ ಇರಲಿಲ್ಲ.

ಮರದಿಂದ ಮರಕ್ಕೆ ಮಂಗಗಳು ಜಿಗಿದಾಡುತ್ತಲಿದ್ದವು. ಗಿಡಗಳ ತಣ್ಣೆಳಲಲ್ಲಿ ಕುಳಿತುಕೊಂಡು ಚಿನ್ನಾಟವಾಡುತ್ತಲಿದ್ದ ಮಂಗಗಳನ್ನು ಹಿಂದಕ್ಕಿರಿಸಿ ಮುಖ್ಯ ರಸ್ತೆಯನ್ನು ಬಿಟ್ಟು ಹೊಸರಿತ್ತಿಯ ಕಡೆಗೆ ನಮ್ಮ ಮೋಟಾರು ತಿರುಗಿತು. ಅದು ಚಕ್ಕಡಿಯ ದಾರಿ. ಧೂಳು ತುಂಬಿತ್ತು. ಹೊಸರಿತ್ತಿಯನ್ನು ಮುಟ್ಟುವ ಹೊತ್ತಿಗೆ ಹೊಟ್ಟೆ ತುಂಬುವಷ್ಟು ಧೂಳನ್ನು ಬಹುಶಃ ನಾವು ನುಂಗಿರಬೇಕು.

ಮಧ್ಯಾಹ್ನ ಹೊಸರಿತ್ತಿಯನ್ನು ನಾವು ಮುಟ್ಟಿದಾಗ ಹೊಸ ಜಗತ್ತಿನಲ್ಲಿ ಪ್ರವೇಶಿಸಿದಂತೆ ನಮಗೆ ಅನ್ನಿಸಿತ್ತು. ಆ ಊರ ಜನಸಂಖ್ಯೆ ೨೫೦೦ ಇರಬೇಕು. ಆದರೆ ಅಂದು ಹೊಸರಿತ್ತಿಯಲ್ಲಿ ಒಂದು ಲಕ್ಷಕ್ಕೆ ಮಿಕ್ಕಿ ಜನ ಸೇರಿದ್ದಿತು. ಒಕ್ಕಲುತನ ಪ್ರದರ್ಶನ, ದನಗಳ ಪ್ರದರ್ಶನ ಅಲ್ಲಿ ನಡೆದಿದ್ದಿತು. ಸುತ್ತಣ ನಾಡಿನಿಂದ ಹಳ್ಳಿಗರು ಉತ್ಸುಕತರಾಗಿ ಪ್ರದರ್ಶನಕ್ಕೆಂದು ಬಂದುದರಿಂದ ಜನಸಂದಣಿ ಅಷ್ಟಕ್ಕೆ ಮುಟ್ಟಿತ್ತು.

ಕರ್ನಾಟಕದ ರೈತರು ! ಗಟ್ಟಿಗರು. ಎತ್ತರದ ನಿಲವು. ಹೊಳೆವ ಕಂಗಳು. ಶುಭ್ರ ದಂತಪಂಕ್ತಿ. ನಡೆ ನುಡಿಯಲ್ಲಿ ಉದ್ದಕ್ಕೂ ಎದ್ದು ಕಾಣುವ ಸಾರಳ್ಯ. ನಿಜವಾಗಿಯೂ ಅವರು ಗಾರುಡಿಗರು. ಪಂಜಾಬದ ಸೀಖ ರೈತರನ್ನೇ ನೋಡಿದಂತೆ ನನಗೆ ನೆನಪಾಗುತ್ತಿತ್ತು. ಸೀಖರ ಆಹಾರ ಇವರಿಗಿಂತ ಭಿನ್ನವಾಗಿದ್ದರೂ ಅವರಂತೆಯೆ ಇವರೂ ಗಟ್ಟಿಗರು., ಸದೃಢ ಕಾಯರು. ಅವರ ಸುಂದರ ಆರೋಗ್ಯದ ರಹಸ್ಯವೇ ಅವರ ಆಹಾರ. ಜೋಳ, ಗೋದಿ, ಹಾಲು, ಮೊಸರು, ಬೆಣ್ಣೆ !

ಪಟ್ಟಣಿಗರಿಗೂ ಇವರಿಗೂ ಏನೆಷ್ಟು ಅಂತರ? ಅರೆಹೊಟ್ಟೆ, ಗುಳಿಬಿದ್ದ ಕಣ್ಣು, ಒಳಸೇರಿದ ಗಲ್ಲ, ಎಲುವಿನ ಹಂದರ, ಅಲ್ಲಿ ಪಟ್ಟಣದಲ್ಲಿ! ಇಲ್ಲಿಯೋ ಜನತೆ ತುಂಬು ಜೀವನದಿಂದ ಬದುಕನ್ನು ಹೊರೆಯುತ್ತಿದ್ದಾರೆ. ಪ್ರಕೃತಿಯೆ ಅವರ ಶುಭ್ರ ಜೀವನಕ್ಕೆ ದಾರಿ ಮಾಡಿಕೊಟ್ಟದೆ. ಪಟ್ಟಣದ ರೋಗ ರುಜಿನಗಳು ಇಲ್ಲಿ ತಲೆಯೆತ್ತಿ ನಡೆಯುವುದನ್ನು ನೀವೆಂದಿಗೂ ಕಾಣಲಾರಿರಿ.

ಎಲ್ಲ ಧರ್ಮೀಯರೂ ಇಲ್ಲಿದ್ದಾರೆ. ಆದರೆ ಮತೀಯತೆಯ ಲೋಪ ದೋಷಗಳು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಹುಡುಕಿದರೂ ಸಿಗಲಾರವು. ಬ್ರಾಹ್ಮಣ ಬ್ರಾಹ್ಮಣೇತರರು, ಮುಸಲ್ಮಾನ ಮುಸಲ್ಮಾನೇತರರು—ಅಂತ ಭಿನ್ನಭೇದಗಳು ಔಷಧಕ್ಕೂ ಕೂಡ ಹೊಸರಿತ್ತಿಯಲ್ಲಿ ಕಾಣಲಾರವು. ಜಾತಿ ಹಲವು. ಆದರೆ ಬದುಕು ಒಂದು. 'ದೇವನೊಬ್ಬ ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ' ಎಂಬ ಬಸವಣ್ಣನವರ ಉಕ್ತಿ ಅವರ ಪಾಲಿನ ಸತ್ಯ ಯಂ ಶೈವಾಃ ಸಮುಪಾಸತೇ ಶಿವ ಇತಿ, ಬ್ರಹ್ಮೇತಿ ವೇದಾಂತಿನೋ.... ಹಳೆಬೀಡಿನ ಶಿಲಾಶಾಸನ ಹೊಸರಿತ್ತಿಯ ಶಿಲಾಶಾಸನ! ಹೊಸರಿತ್ತಿ ನಾಡಿನ ಶಾಸನ ಕನ್ನಡ ನಾಡಿನ ಶಾಸನ ವೆನ್ನುವಲ್ಲಿ ಸಂದೇಹವೇನು ?

ಹೊಸರಿತ್ತಿ ನಾಡಿನ ಹಳ್ಳಿಗರೇ ಕನ್ನಡ ನಾಡಿನ ಹಳ್ಳಿಗರು. ನಿರ್ಮಲ ಚಾರಿತ್ರ್ಯ ಅವರದು. ಧರ್ಮವೇ ದೇವರು. ದೇವರಿಗೆ ಅಂಜಿ ನಡೆಯುವರು. ಇಂದು ಅವರ ಮಧ್ಯೆ ಸ್ವಂತದ ಬೇಳೆಯನ್ನು ಬೇಯಿಸಿಕೊಳ್ಳುವ ಸ್ವಾರ್ಥ್ಯ ಲಾಲಸಿಗಳ ಗುಂಪೊಂದು ತಲೆಯೆತ್ತಿ ನಿಂತಿದೆ. ಆದರೆ ಕೊನೆಗೆ ಗೆಲ್ಲುವುದು ಅಸತ್ಯವಿಲ್ಲ, ಸತ್ಯ! ಒಕ್ಕೂಟ ಕರ್ನಾಟಕದ ಏಳು ಸಾವಿರ ಹಳ್ಳಿಗಳನ್ನೇ ನಂಬಿ ಕುಳಿತಿರುವ ಕನ್ನಡ ನಾಡಿನ ಭವಿಷತ್ತು ಆಶಾದಾಯಕವಿದೆ, ಸೂರ್ಯ ಪ್ರಕಾಶದಷ್ಟು ನಿಚ್ಚಳವಿದೆ.

ಹಳ್ಳಿಯ ರೈತರೊಂದಿಗೆ, ಕೂಲಿ ಕುಂಬಳಿಗಳೊಂದಿಗೆ ನಾನು ಮಾತನಾಡಿದೆ. ಮುಂಬೈ ದಿಲ್ಲಿಗಳಲ್ಲಿ ನಡೆಯುತ್ತಿರುವ ರಾಜಕಾರಣದ ಅರ್ಥವೇ ಅವರಿಗಾಗುವದಿಲ್ಲ. ಖೇರ, ಪಂಡಿತಜೀಯವರ ಹೆಸರನ್ನು ಅವರಲ್ಲಿ ಬಹಳ ಜನ ಅರಿತಿರಲಾರರು. ಆದರೆ ಗಾಂಧೀಜಿಯ ಹೆಸರನ್ನು ನಾನವರಿಗೆ ಹೇಳಿದಾಗ ಅವರ ಕಂಗಳಲ್ಲಿ ಮಿಂಚೊಂದು ಆ ಕೂಡಲೆ

ಹೊಳೆಯಿತು. ಭಾರತ ಭಾಗ್ಯ ವಿಧಾತನ ಬಗೆಗೆ ಉತ್ಸುಕತೆಯಿಂದ ಅವರು ಮಾತನಾಡಲೆಳಸಿದರು. ಹಿಂದುಸ್ತಾನಕ್ಕೆ ಸ್ವರಾಜ್ಯ ಬಂದಿದೆ. ಆದರೆ ಹಳ್ಳಿಗರಿಗೆ ಇನ್ನೂ ಬಂದಿಲ್ಲ. ಸ್ವಾತಂತ್ರ್ಯದ ಸಿಹಿ ಫಲವನ್ನು ತಿನ್ನುವುದಕ್ಕೆ ಈ ಹಳ್ಳಿಗರು ಆತುರರಾಗಿದ್ದಾರೆ. ರಾಜಕೀಯದ ಮಾಲಿನ್ಯದ ಸೋಂಕಿನಿಂದ ದೂರವಾದ ತಿಳಿ ಮನಸ್ಸಿನ ಕನ್ನಡ ನಾಡಿನ ರೈತಕುಲ ಆಶಾಪೂರ್ಣ ದೃಷ್ಟಿಯಿಂದ ಕರ್ನಾಟಕ ಪ್ರಾಂತೀಕರಣವನ್ನು ನೋಡುತ್ತಲಿದೆ! ಕನ್ನಡಿಗರ ಮನೆಯನ್ನು ಆಳುವದಕ್ಕೆ ಕನ್ನಡಿಗರು ಎಂದು ಬಂದಾರು? ತಮ್ಮ ಜೀವನದ ಆಚಾರ ವಿಚಾರ, ಶೀಲ ಸಂಸ್ಕೃತಿಗಳನ್ನು ಅರಿತುಕೊಂಡ ತಮ್ಮವರೆ ಅಧಿಕಾರದ ಸೂತ್ರಗಳನ್ನು ಹಿಡಿದು ಮುಂಬಂದಾಗ ಕನ್ನಡ ನಾಡಿನ ಕಲ್ಯಾಣವಾಗುತ್ತಿದೆಯೆಂದು ಅವರು ಬಲವಾಗಿ ನಂಬಿದ್ದಾರೆ ಅಂತ ಕಲ್ಯಾಣ ಮುಹೂರ್ತ ಸನ್ನಿಹಿತವಾದಾಗ ಅವರಿಗೆಷ್ಟು ಸುಖ ಸಂಭ್ರಮವೋ, ಆನಂದ ಉನ್ಮಾದವೋ!

ಅದೆಲ್ಲ ಸರಿ! ಕರ್ನಾಟಕಕ್ಕೆ ಪ್ರತ್ಯೇಕ ಪ್ರಾಂತವೇ ಏಕೆ ಬೇಕು? ಹಾಗೆಂದು ಮೇಲಿಂದಮೇಲೆ ನಾನು ಅವರಿಗೆ ಪ್ರಶ್ನೆ ಕೇಳಿದೆ. ಒಬ್ಬ ರೈತನಿಂದ ಬಂದ ಉತ್ತರ ನನ್ನ ಕಂಗಳಂಚಿನಲ್ಲಿ ಉಪ್ಪುನೀರನ್ನು ತಂದಿತ್ತು!

'ಒಂದು ಕೊಡ ನೀರು ಸಿಗುವುದೂ ನಮಗಿಂದು ಕಷ್ಟವಾಗಿದೆ. ಆರು ಮೈಲು ದೂರ ಹೋಗಬೇಕು, ಆಗ ಒಂದು ಬಿಂದಿಗೆ ಸಿಹಿ ನೀರು. ಯಾರು ಕೇಳುತ್ತಾರೆ ನಮ್ಮ ದುಃಖವನ್ನು? ' ಹೀಗೆ ಮಾತನಾಡುತ್ತಿದ್ದಂತೆ ಅವನ ಕೊರಳು ಬಿಗಿದು ಬಂದಿತ್ತು.

'ನಮ್ಮ ಸರಕಾರ ನಮಗೆ ಒಂದು ಭಾವಿಯನ್ನು ತೆಗೆಸಿ ಕೊಟ್ಟಿಲ್ಲ. ಮುಂಬೈ ನಮಗೆ ದೂರದ ನಗರ. ನಮ್ಮ ಕೂಗು ಅಲ್ಲಿಗೆ ಮುಟ್ಟುವದೇ ಇಲ್ಲ. ಇಲ್ಲೇ ಹುಬ್ಬಳ್ಳಿಗೋ ಅಥವಾ ನಮ್ಮ ನಾಡಿನ ಇನ್ನಿತರ ಯಾವ ಭಾಗದಲ್ಲೋ ಕನ್ನಡ ನಾಡಿನ ರಾಜಧಾನಿ ಬಂದರೆ ಅಲ್ಲಿಗೆ ಹೋಗಿ ನಮ್ಮ ಕಾರ್ಯವನ್ನು ನಾವು ಮಾಡಿಕೊಂಡು ಬಂದೇವು. ಒತ್ತಾಯ ಮಾಡೇವು. ನಮ್ಮನ್ನು ಕೇಳುವಂತೆ ಕೂಗಿ ಕೂಗಿ ಹೇಳೇವು. ಆದರೆ ಈಗ ಯಾರಿಗೆ ಹೇಳೋಣ?

ನಿಜ ! ಅವನ ಮಾತಿನಲ್ಲಿ ಹದಿನಾರಾಣೆ ಸತ್ಯವಿದೆ. ಕರ್ನಾಟಕದ ರಾಜಕೀಯ ಸಮಸ್ಯೆಯನ್ನು ಅವನು ಅರಿತುಕೊಂಡ ರೀತಿ ಇದು. ಸಮಸ್ಯೆಯನ್ನು ವಾಸ್ತವಿಕತೆಯ ದೃಷ್ಟಿಯಿಂದಲೇ ಅವನು ನೋಡುತ್ತಿದ್ದಾನೆ.

ನನ್ನ ಸ್ನೇಹಿತರು ರೈತರ ಸಭೆಗೆ ಕರೆದುಕೊಂಡು ಹೋದರು. ವರದಾ ನದೀ ತೀರದ ಮೇಲೆ ಸುಂದರವಾಗಿ ರಚಿತವಾದ ಹೆಂದರದಲ್ಲಿ ಐದು ಸಾವಿರಕ್ಕೆ ಮಿಕ್ಕಿ ರೈತರು ಕೂಡಿದ್ದರು. ವೇದಿಕೆಯ ಮೇಲೆ ಕರ್ನಾಟಕದ ಕೆಲವು ಮುಖಂಡರಿದ್ದರು. ಶ್ರೀಗಳಾದ ಹಳ್ಳೀಕೇರಿ, ಟಿ. ಆರ್ ನೆಸ್ವಿ,. ಎಸ್. ಆರ್. ಕಂಠಿ ಮುಂತಾದವರು ಅಲ್ಲಿದ್ದರು. ಶ್ರೀ ಹಳ್ಳೀಕೇರಿಯವರು ಅದೇ ಊರಿನವರು. ಅವರೇ ಆ ಸಭೆಯ ಸಂಘಟಕರು. ವೇದಿಕೆಯ ಕಡೆಗೆ ಆಶಾಪೂರ್ಣ ದೃಷ್ಟಿಯಿಂದ ನೋಡುತ್ತ ನೆಲದ ಮೇಲೆ ಕುಳಿತುಕೊಂಡ ರೈತರ ಚಿತ್ರ ಹೃದಯ ಸ್ಪರ್ಶಿಯಾಗಿತ್ತು. ಸಭೆಯಲ್ಲಿ ಅನೇಕ ವಿಷಯಗಳು ಚರ್ಚೆಗೆ ಬಂದವು. ಒಕ್ಕಲು ಜನರ ಏಳ್ಗೆಯ ಬಗೆಗೆ, ರೈತ ಜಮೀನದಾರರ ಸಂಬಂಧಗಳ ಬಗೆಗೆ ಅವರು ಚರ್ಚಿಸಿದರು. ಪ್ರಾಸಂಗಿಕವಾಗಿ ಇನ್ನೊಂದು ಮಾತನ್ನು ಹೇಳಬಹುದು. ಒಕ್ಕೂಟ ಕರ್ನಾಟಕವು ಕೊರತೆಯ ಪ್ರಾಂತವಲ್ಲ. ಅದು ತನ್ನ ಆಹಾರವನ್ನು ತಾನು ಉತ್ಪಾದಿಸುತ್ತದೆ. ಜಗತ್ ಪ್ರಸಿದ್ಧವಾದ ದಕ್ಷಿಣದ ಹತ್ತಿಯ ತಪ್ಪಲುಭೂಮಿಯೇ ಕರ್ನಾಟಕದ ಭೂಮಿ. ಈ ಭೂಮಿಯ ಬಹು ಭಾಗದ ಒಡೆತನ ರೈತರ ಕೈಯಲ್ಲಿಯೇ ಇದೆ. ಕರ್ನಾಟಕದ ಸಾಗುವಳಿ ಭೂಮಿ ಸುಮಾರು ೭೨,೬೩,೦೦೦ ಎಕರೆ ಭೂಮಿ ಆಗಬಹುದು. ಜೋಳ, ಗೋದಿ, ಭತ್ತ, ರಾಗಿ, ಕಬ್ಬು, ತಂಬಾಕ, ಅಕ್ಕಡಿಕಾಳು, ಹತ್ತಿ, ತೆಂಗು, ಮೆಣಸಿನಕಾಯಿ, ಆಲೂಗಡ್ಡೆ – ಇವು ಅದರ ಬೆಳೆಗಳು. ಹೊಸರಿತ್ತಿಯ ಫಲವತ್ತಾದ ಕಪ್ಪು ಭೂಮಿ ಕರ್ನಾಟಕದ ಆಹಾರ ಉತ್ಪಾದನೆಗೆ ನೆರವಾಗುವಲ್ಲಿ ಸಂಶಯವೇ ಇಲ್ಲ.

ಉಪನ್ಯಾಸಗಳನ್ನು ಏಕಚಿತ್ತದಿಂದ ಕೇಳುತ್ತ ಕುಳಿತ ರೈತರು ನನ್ನ ಮನಸ್ಸಿನ ಮೇಲೆ ಮರೆಯಲಾರದ ಪರಿಣಾಮವನ್ನುಂಟುಮಾಡಿದರು. ಸಭೆಯಲ್ಲಿ ಏಕೀಕರಣದ ಪ್ರಶ್ನೆ ಚರ್ಚೆಗೆ ಬಂದಾಗ ಚಕಮುಕಿಗಳೆದ್ದವು. ಮುಖಂಡರು ಜನತೆಯನ್ನೇಕೆ ಕೈಬಿಟ್ಟರು ? ಹೈಕಮಾಂಡಿನ ಆದೇಶಕ್ಕೆ

ನಾಯಕರೇಕೆ ತಲೆವಾಗಿದರು? ಕಾಂಗ್ರೆಸ್ ಶಾಸನ ಸಭೆಗಳನ್ನು ಶಾಸನ ಸಭಾಸದರು ಏಕೆ ತ್ಯಜಿಸಲಿಲ್ಲ? ದಿವಾಕರ್ ನೌಕರಿಗೆ ರಾಜೀನಾಮೆ ಕೊಟ್ಟು ಏಕೆ ಹೊರಬೀಳಲಿಲ್ಲ? ಇವು ಅವರು ಕೇಳಿದ ಪ್ರಶ್ನೆಗಳು. ರೈತರು, ಎಡಪಕ್ಷದವರು, ವಿದ್ಯಾರ್ಥಿಗಳು, ತರುಣರು—ಅವರೆಲ್ಲ "ಈ ಪ್ರಶ್ನೆಗಳಿಗೆ ಏನು ಉತ್ತರ ಹೇಳುತ್ತೀರಿ" ಎಂದು ಗರ್ಜಿಸುತ್ತಿದ್ದರು. ಸಭೆ ಗೊಂದಲದಲ್ಲಿ ಪರ್ಯವಸಾನ ಹೊಂದಬಹುದೆಂದು ನಾನು ತಿಳಿದಿದ್ದೆ. ಚೀರುತ್ತಿದ್ದರು, ಕೇಕೆ ಹೊಡೆಯುತ್ತಿದ್ದರು. ಅವರ ಸಂತಾಪ ಬೈಗುಳದ ಅಂಚನ್ನು ಮುಟ್ಟಿ ಮುಟ್ಟಿ ಬರುತ್ತಲಿದ್ದಿತು. ಅವರು ತಾಳ್ಮೆಗುಂದಿದ್ದರು, ಉದ್ವಿಗ್ನರಾಗಿದ್ದರು, ಕ್ಷೋಭೆಗೊಂಡಿದ್ದರು. ಜಪ್ಪಿಸಿ ನೆಗೆದು ಬರುವ ಗಾಯಗೊಂಡ ಹೆಬ್ಬುಲಿಯಂತೆ ಅವರು ಸಂತಪ್ತರಾಗಿದ್ದರು.

ಈ ಹೊತ್ತಿಗೆ ಓರ್ವ ಮಹಿಳೆ ವೇದಿಕೆಯ ಮೇಲೆ ಬಂದು ನಿಂತಳು. ಅವರು ದಾವಣಗೆರೆಯವರು. ಬಳ್ಳಾರಿ ಸಿದ್ದಮ್ಮ. ಸರ್ವ ಪಕ್ಷದ ಪರಿಷತ್ತಿನ ಅಧ್ಯಕ್ಷಿಣಿ ರಾಜಕೀಯ ರಂಗದಲ್ಲೂ ಅವರಿಗಿರುವ ಮನ್ನಣೆಯ ಸ್ಥಾನ ದೊಡ್ಡದು. ಸಿದ್ದಮ್ಮ ವೇದಿಕೆಯ ಮೇಲೆ ಬಂದು ನಿಂತಾಗ ಜನತೆ ಸಂಭ್ರಮದ ಸ್ವಾಗತ ಕೋರಿತು. ಆಕೆ ಮಾತನಾಡಿದಾಗ ಸಭೆಗೆ ಸಭೆಯೇ ಕಂಪನಗೊಂಡಿತು. ಮಾತು ಗುಡುಗು. ವಿಚಾರ ಮಿಂಚು. ಕರ್ನಾಟಕದ ಮುಖಂಡರಿಗೆ ಆಹ್ವಾನವನ್ನಿತ್ತಳು. ಕರ್ತವ್ಯಚ್ಯುತರಾದ ನಾಯಕರನ್ನು ಇನ್ನು ಕರ್ನಾಟಕವು ನಂಬಲಾರದು. ರಾಜಕೀಯ ಮುಖಂಡತ್ವವನ್ನು ಇನ್ನು ಅವರು ಪಡೆಯಲಾರರೆಂದು ಸಿದ್ದಮ್ಮ ಹೇಳಿದಳು. "ಹೈ ಕಮಾಂಡಿನ ಒದೆತ"ವನ್ನೂ ಹಸಾದವೆಂದು ಎತ್ತಿಕೊಂಡ ಮುಖಂಡರ ಬುದ್ಧಿಮತ್ತೆಯನ್ನು ಅಣಕಿಸಿದಳು. "ಗಟ್ಟಿಗರಾದ ನಾಯಕರನ್ನು ನಾವು ಪಡೆಯೋಣ. ಸ್ವಾರ್ಥದ ಹೊಂಚು ಹಾಕಿಕೊಂಡು ಮುಂಬರುವ ಮುಖಂಡರಿನ್ನು ನಮಗೆ ಸಾಕು" ಎಂದು ಸಿದ್ದಮ್ಮ ಸಾರಿ ಹೇಳಿದಾಗ ಸರಳ ಮನಸ್ಸಿನ ರೈತರು ಚಪ್ಪಾಳೆ ಹೊಡೆದರು. ಆಕೆಯ ಮಾತು ಅವರ ಹೃದಯದಲ್ಲಿ ಮೂಡಿ ನಿಂತಿತ್ತು.

ಸಿದ್ದಮ್ಮನ ವಾಕ್-ಪ್ರೌಢಿಮೆ ರೈತರನ್ನು ಮುಗ್ಧಗೊಳಿಸಿತ್ತು. ಚಿತ್ರದಲ್ಲಿ ಬರೆದ ಗೊಂಬೆಯಂತೆ ಕುಳಿತುಕೊಂಡ ರೈತರ ನೋಟ ನನ್ನ

ಮನಸ್ಸನ್ನು ಸೂರೆಗೊಂಡಿತ್ತು. ಸಿದ್ದಮ್ಮ ಮಾತನಾಡುತ್ತಿದ್ದಾಗ ಆಕೆಯ ಧ್ವನಿ ಇರುಳಿನ ಪ್ರಶಾಂತ ವಾತಾವರಣದಲ್ಲಿ ಪ್ರತಿಧ್ವನಿಸಿ ಹೊಸರಿತ್ತಿಯ ಸಭಿಕರ ಮೇಲೆ ಮರೆಯಲಾರದ ಪರಿಣಾಮವನ್ನುಂಟು ಮಾಡಿತ್ತು.

ರಾತ್ರಿಯ ಕೊನೆಯ ಜಾವದಲ್ಲಿ ಸಭೆ ಮುಕ್ತಾಯವಾಯಿತು. ರೈತರು ರಾತ್ರಿಯ ಜಾಗರಣೆಯಿಂದುಂಟಾದ ದಣಿವನ್ನೆಲ್ಲ ಮರೆತು ಸುಖ ಸಂತೃಪ್ತಿಯ ಯೋಜನೆಯನ್ನು ಕಂಡವರಂತೆ ಸುಖಿಗಳಾಗಿ ತೋರಿದರು. ಉಪನ್ಯಾಸಕರ ಅಭಿಪ್ರಾಯಗಳಿಂದ ಅವರ ಮನ್ಸಿನ ಕಳವಳ ಪರಿಹಾರ ಗೊಂಡಂತೆ ಕಾಣಿಸಿತು. ಸಿದ್ದಮ್ಮ ಹೇಳಿದ ಮಾತುಗಳನ್ನಂತೂ ಅವರು ಮರೆಯಲಾರರು. ಊರ ಹೊರಗಿನ ಹೊಲಗಳಲ್ಲಿ ಹೊಡೆದ ಡೇರೆಗಳನ್ನು ನಾನು ನನ್ನ ಸ್ನೇಹಿತರೊಂದಿಗೆ ಸೇರುತ್ತಲಿದ್ದಾಗ ಆ ರಾತ್ರಿ ಕಂಡ ಚಿತ್ರ ಇನ್ನೂ ಹಾಗೆಯೇ ಇದ್ದಿತು. ದೂರದ ದಿಗಂತದಲ್ಲಿ ಅರ್ಧ ಚಂದ್ರನು ಹರಿದ ಬೆಣ್ಣೆಯುಂಡೆಯಂತೆ ತೇಲುತ್ತಲಿದ್ದನು. ಕೆಳಗಡೆ ಮೋಡ ಪಡೆಗಳು ಕವಿದಿದ್ದವು. ಇನ್ನೂ ದೂರದೂರದಲ್ಲಿ ತಾರಾ ಮಂಡಲ ಲಕಲಕಿಸುತ್ತಿದ್ದವು. ಹಾಸುಗೆಯ ಮೇಲೆ ಅವನ್ನೆಲ್ಲ ನೋಡುತ್ತ ಒರಗಿಕೊಂಡಾಗ ಹೊಸರಿತ್ತಿಯ ಸಭೆಯಲ್ಲಿ ಕಂಡ ದೃಶ್ಯಗಳು ಒಂದರ ಮುಂದೊಂದು ತೇಲಿ ತೇಲಿ ಹೋಗುತ್ತಿದ್ದವು. ಅದೊಂದು ಮರೆಯಲಾರದ ಮುಹೂರ್ತ!

ಮರುದಿನದ ಉದಯದಲ್ಲಿ ಗಂಟು ಗದಡಿಗಳನ್ನು ಕಟ್ಟಿಕೊಂಡು ಬಂದ ದಾರಿಯನ್ನು ಹಿಡಿದು ನಡೆಯುತ್ತಿರುವಾಗ ಸುಂದರ ಸ್ವಪ್ನವೊಂದು ನನಸಾಗಿ ನಿಂತಿತ್ತು. ಕರ್ನಾಟಕದ ಉಜ್ವಲ ಭವಿಷತ್ತನ್ನು ನಿರೂಪಿಸುವವರು ಇನ್ನಾರೂ ಅಲ್ಲ, ಕರ್ನಾಟಕದ ರೈತರೆ ! ಅವರೇ ಈನಾಡಿನ ಆಶಾ ಕಿರಣ !

# ಬಹಿರಂಗ ಪತ್ರ

ಕರ್ನಾಟಕದ ಮುಖಂಡರಿಗೆ,

ಸಪ್ರೇಮ ವಂದನೆಗಳು.

ಅಂತೂ ನೀವು ಒಂಬತ್ತನೆಯ ತಾರೀಖಿನ ದಿನ ಸಭೆ ಕೂಡಿಸಲಿದ್ದೀರೆಂದು ಕೇಳಿ ಸಂತೋಷವಾಗಿದೆ. ದೇವರು ನಿಜವಾಗಿಯೂ ದೊಡ್ಡವನು. ಇದಕ್ಕೂ ಮೊದಲೇ ನೀವು ಕೂಡಬೇಕಿತ್ತು. ವರ್ಕಿಂಗ ಕಮಿಟಿಯ ಗೊತ್ತುವಳಿಯು ನಿಮ್ಮ ಮುಖಕ್ಕೆ ಮಸಿ ಬಡೆದಂದಿನಿಂದ ನೀವು ಮುಂದೇನು ಮಾಡುತ್ತೀರೋ ಎಂಬ ಬಗೆಗೆ ಜನತೆ ಚಿಂತಾತುರರಾಗಿರುವುದು ಸಹಜವೆ ಆಗಿದೆ. ಗದುಗಿನ ಸಭೆಯ ನಿಮ್ಮ ನಿರ್ಜೀವ ಗೊತ್ತುವಳಿಯಿಂದ ಕನ್ನಡಿಗರು ವಂಚಿತರಾಗಿದ್ದಾರೆ. ಲಕ್ಷೋಪಲಕ್ಷ ಕನ್ನಡಿಗರಿಗೆ ನಿಮ್ಮ ರಾಜಕೀಯ ಮುತ್ಸದ್ದಿತನದ ದಿವಾಳಿಖೋರತನದ ಪರಿಚಯವಾಯಿತು. ನಿಮ್ಮಿಂದ ಅವರು ಬಹಳ ಅಪೇಕ್ಷಿಸಿದ್ದರು. ಬಿಕ್ಕಟ್ಟಿನ ಕಾಲದಲ್ಲಿ ಕನ್ನಡ ನಾಡಿನ ರಾಜಕೀಯ ಸೂತ್ರಗಳನ್ನು ಸರಿಯಾಗಿ ಹಿಡಿದುಕೊಂಡು ನಾಡಿಗೆ ದಿಗ್ದರ್ಶನ ಮಾಡಬಹುದೆಂದು ನಂಬಿದವರು ಕೆಟ್ಟರು. ಆದರೆ ನೇರವಾಗಿ ರಂಗಮಂಟಪಕ್ಕೆ ಸಾಗಿ ಬರುವಬದಲು ನೀವು ತೆರೆಯ ಮರೆಯ ಹಿಂದೆ ಬುರುಕೆಯನ್ನು ಹಾಕಿಕೊಂಡು ಗಲ್ಲಕ್ಕೆ ಕೈ ಹಚ್ಚಿ ಕುಳಿತುದು ದುರ್ದೈವದ ಮಾತು! ಹುಲಿಯಂತೆ, ವೀರ ಸೇನಾನಿಗಳಂತೆ ಹೋರಿ ಸತ್ವವನ್ನು ಕಾಪಾಡಿಕೊಳ್ಳುವುದನ್ನು ಬಿಟ್ಟು ಇಲಿಯಂತೆ, ಹೆಂಬೇಡಿಗಳಂತೆ ಬಿಲವನ್ನು ನೀವು ಸೇರಿದಿರಿ. ಕರ್ನಾಟಕದ ಶಾಸನ ಸಭಾಸದರಿಗೆ ರಾಜೀನಾಮೆಯ ನ್ನೀಯಲು ಆದೇಶವನ್ನು ಕೊಡುವ ಮುನ್ನ ನಿಮಗೆ ಮುಂಬರುವ ಭೀಕರ ಕಾಳಗದ ಅರಿವು ಇದ್ದಿರಬೇಕು. ಅದನ್ನೆಲ್ಲ ಯೋಚಿಸಿಯೆ ನೀವು ಹಾಗೆ ಆದೇಶ ಕೊಟ್ಟಿರಬೇಕು. ಅಂತು ಆದೇಶವನ್ನಿತ್ತ ನೀವು ಹೀಗೇಕೆ ಮಾಡಿದಿರೊ! ಇದು ಅನಾರ್ಯ, ಅಸ್ವರ್ಗ್ಯ, ಅಕೀರ್ತಿಕರ!

ಎಲ್ಲಿಯೊ ಏನೋ ತಪ್ಪಿದಂತೆ ಕಾಣುತ್ತದೆ. ವರ್ಕಿಂಗ ಕಮಿಟಿಯ ಹೊಡೆತ ಬಹಳ ಬಲವಾಗಿ ಬಿದ್ದಂತೆ ಕಾಣಿಸುತ್ತದೆ. ತತ್ ಪರಿಣಾಮವಾಗಿ ವಿವೇಕ ಸೂತ್ರದ ಗೊಣಸೇ ಮುರಿದು ಹೋದಂತೆ ತೋರುತ್ತಿದೆ. ಪೆಟ್ಟು

ತಿಂದು ನೆಲಹಿಡಿದವರಿಗೆ ಮೇಲಕ್ಕೇಳಲು ಸಮಯವೂ ಸಾಲದೆ ಹೋಯಿತೊ ಏನೊ! ಆದರೆ ನಿಜವಾಗಿಯೂ ವೇಳೆ ಸಾಕಷ್ಟು ಇದ್ದಿತು. ಏನು ಮಾಡುವುದು? ಎತ್ತು ನೆಲ ಹಿಡಿದು ಮಲಗಿ ಬಿಟ್ಟಿದೆ! ಏಳಲೇ ಒಲ್ಲದು!

ಗೆಳೆಯರೇ, ಜೀವನ ಅನಂತವಿದೆ. ಆದರೆ ವೇಳೆಯೆ ಸ್ವಲ್ಪವಿದೆ. ಹಕ್ಕಿ ಹಾರುತಿದೆ. ನೋಡಿದಿರಾ? ಎವೆ ತೆರೆದಿಕ್ಕುವದರೊಳಗಾಗಿ ಸಾಮ್ರಾಜ್ಯ ಮಂಡಲಗಳನುರುಳಿಸಿ ಗಾವುದ ಗಾವುದ ಮುಂದೆ........ಹಕ್ಕಿ ಹಾರುತಿದೆ, ನೋಡಿದಿರಾ? ಕಾಲ ಸೂರ್ಯನಿಗೆ ಸರಿಯಾಗಿ ನೀವು ಛತ್ರಿಗೆಯನ್ನು ಹಿಡಿಯದೆ ಹೀಗೆಯೆ ಸಾಗಿದಿರೊ, ದೇವರೇ ಗತಿ. ಯಾವ ದಂಡೆಗೆ ನೀವು ಹೋಗಿ ಮುಟ್ಟುತ್ತೀರೋ ಏನೊ!

ಜನತೆ ನಿಮ್ಮಿಂದ ಏನನ್ನು ಬಯಸುತ್ತಿದೆ. ನೀವು ತಿಳಿಯಲಿಚ್ಛಿಸುವಿರಾ? ಮೊದಲನೆಯದಾಗಿ ನೀವು ತಳೆದ ನಿಲುಮೆಯನ್ನು ಬಿಟ್ಟು ಒಂದಂಗುಲವೂ ಚಲಿಸಕೂಡದು. ಎರಡನೆಯದಾಗಿ ನಿಮ್ಮ ಶಾಸನ ಸಭಾಸದಸ್ಯರು ರಾಜೀನಾಮೆಯನ್ನು ಕೊಟ್ಟು ಹೊರಬೀಳಬೇಕು. ಮೂರನೆಯದಾಗಿ ಅಧಿಕಾರಿವರ್ಗ ಪ್ರಸಂಗ ಬಂದರೆ ನೌಕರಿಗೆ ತಿಲಾಂಜಲಿಯನ್ನು ಕೊಡಬೇಕು

ಇವುಗಳನ್ನು ಕಾರ್ಯದಲ್ಲಿ ತರುವುದು ಕಷ್ಟದ ಮಾತೆಂದು ನನಗೆ ಗೊತ್ತಿದೆ. ನೀವು ಕಾಂಗ್ರೆಸ್ಸಿನ ನಿಷ್ಠಾವಂತ ಅನುಯಾಯಿಗಳಾಗಿರುವುದೂ ಕಳೆದ ದಶಕಗಳಿಂದ ಕಾಂಗ್ರೆಸ್ಸಿನ ಧ್ವಜದಡಿಯಲ್ಲಿ ನಿಂತು ರಾಷ್ಟ್ರದ ಬಂಧವಿಮೋಚನೆಗಾಗಿ ಕರಣತ್ರಯದಿಂದ ದುಡಿದಿರುವುದೂ ನನಗೆ ತಿಳಿಯದೆ ಇಲ್ಲ. ರಾಜಕೀಯ ರಂಗದಲ್ಲಿ ಗಾಂಧೀಜಿ ತೋರಿದ ಸತ್ಯ ತತ್ವಗಳನ್ನು ಚಾಚೂ ಬಿಡದೆ ಪರಿಪಾಲಿಸುತ್ತ ವೀರಸತ್ಯಾಗ್ರಹಿಗಳಾಗಿ ನೀವು ಸಾಗಿಬಂದಿರುವುದನ್ನು ನಾನುಬಲ್ಲೆ. ಕಂಡ ಸತ್ಯಕ್ಕಾಗಿ ಬದುಕನ್ನೇ ಮುಡಿಪಿಟ್ಟವರು, ನೀವು. ಕಾಂಗ್ರೆಸ್ ಸಂಸ್ಥೆಯಲ್ಲಿ ನಿಮಗಿರುವ ಭಕ್ತಿ, ಶ್ರದ್ಧೆ, ವಿಶ್ವಾಸಗಳನ್ನು ನಾನೂ ಮೆಚ್ಚುತ್ತೇನೆ. ಆದರೆ........?

ಮಿತ್ರರೇ, ದೇಶಕ್ಕಾಗಿ ಪ್ರಾಣವನ್ನೇ ಪಣವಿಡುವ ಸಂದರ್ಭ ಮಾನವ ಜೀವನದಲ್ಲಿ ಎಂದಾದರೊಮ್ಮೆ ಬರುತ್ತದೆ. ಅಂತ ಸಂದರ್ಭ ಈಗ ನಿಮ್ಮೆದಿರು ಬಂದು ನಿಂತಿದೆ. ಕರ್ನಾಟಕದ ದೇವಿ ನಿಮ್ಮನ್ನು ಆಹ್ವಾನಿಸುತ್ತಿದ್ದಾಳೆ. ಗಂಡು ನಾದರೆ ತಾಯ್ನಾಡಿಗಾಗಿ ನಿನ್ನ ಬಲಿ ಕೊಡುವೆಯೇನು?

ನಿಮ್ಮ ಆಸೆ ಆಕಾಂಕ್ಷೆಗಳನ್ನು ಕಡೆಗಣಿಸಿ ನೋಡಿದ ಕಾಂಗ್ರೆಸ್ಸಿನ ಬಗೆಗೆ ನೀವು ಭಕ್ತಿ ವಿಶ್ವಾಸಗಳನ್ನು ತೋರಿಸುವ ಸಂದರ್ಭವಾದರೂ ಎಲ್ಲಿದೆ? ನಿಮ್ಮ ಗೌರವದ ಶುಭ್ರಕೀರ್ತಿಗೇ ಕಲಂಕ ಪ್ರಾಯವಾಗಿ ವರ್ತಿಸಿದ ಹೈಕಮಾಂಡಿಗೆ ನೀವು ಆದರವನ್ನು ವ್ಯಕ್ತಪಡಿಸುವ ಪ್ರಸಂಗವಾದರೂ ಎಲ್ಲಿದೆ ?

ಈಗ ನಿಮ್ಮೆದುರು ಎರಡೇ ಎರಡು ದಾರಿ; ವೀರ ಯೋಧರಂತೆ ಹಿಂದು ಮುಂದೆ ನೋಡದೇ ಕಾಳಗದ ಕಣಕ್ಕಿಳಿಯುವುದು ಇಲ್ಲವೇ ಕರಿ ಮರಿ ನಾಯಿಯಂತೆ ಕುಂಯ್‌ಗುಡುತ್ತ ಬಾಲ ಮುಡಿಚಿಕೊಂಡು ಪಲಾಯನ ಹೇಳುವುದು.

ನೀವು ಗಟ್ಟಿಗರೂ ಸತ್ಯ ಪ್ರೆಮಿಗಳೂ ದೇಶಾಭಿಮಾನಿಗಳೂ ಆಗಿದ್ದರೂ ನಿಮಗಿರುವುದೊಂದೇ ದಾರಿ ಬಂದುದನ್ನು ಇದಿರಿಸುತ್ತಾ ನೀವು ಹೋರಾಡಬೇಕಾಗುವುದು. ಒಂದು ವೇಳೆ ಪಲಾಯನ ಹೇಳಿದರೆ ಕನ್ನಡ ಜನಾಂಗ ನೀವು ಮಾಡಿದ ಅಪರಾಧಗಳನ್ನು ಎಂದೆಂದಿಗೂ ಮನ್ನಿಸಲಾರದು.

ಆಂಧ್ರ ಪ್ರಾಂತ ರಚನೆಯು ಮುಂದೆ ಬಿದ್ದುದನ್ನು ಕಂಡು ನಿಮ್ಮಲ್ಲಿಯೆ ಕೆಲವರು ಕರ್ನಾಟಕದ ಪ್ರಶ್ನೆಯನ್ನೇಕೆ ಮುಂದೊಡ್ಡಬಾರದೆಂದು ಅನ್ನುವವರಿರಬಹುದು. ಜೆ. ವಿ. ಪಿ. ವರದಿಯಲ್ಲಿಯ ಕರಾರುಗಳನ್ನು ತೃಪ್ತಿ ಪಡಿಸುವವರೆಗೂ ಮೈಸೂರಿಗರ ಮನವೊಲಿಸುವವರೆಗೂ ನಮಗೇನೂ ಮಾಡಲು ಸಾಧ್ಯವಿಲ್ಲೆಂಬುದಾಗಿ ಅನ್ನುವವರು ಇನ್ನೂ ಕೆಲವರಿರಬಹುದು. ಹೈಕಮಾಂಡಿನ ವಿರುದ್ಧವಾಗಿ ವರ್ತಿಸದೆ ಸಾವಕಾಶವಾಗಿ ಆ ವಿಷಯವನ್ನು ಪರಿಶೀಲಿಸೋಣವೆಂದು ಅನ್ನುವವರೂ ಹಲವರಿರಬಹುದು. ಆದರೆ ಕರ್ನಾಟಕದ ಸದ್ಯದ ಪ್ರಕ್ಷುಬ್ಧ ರಾಜಕೀಯ ಪರಿಸ್ಥಿತಿಯಲ್ಲಿ ಇಂತಹ "ಬಹುದು" "ಗಿಹುದು" ಗಳನ್ನು ಪರಿಶೀಲಿಸುವುದಕ್ಕೆ ಆಸ್ಪದವಿಲ್ಲೆಂಬುದನ್ನು 'ಬಹುದಪ್ಪ'ಗಳು ಅರಿಯುವರೋ ?

ಮಹನೀಯರೇ, ಅಧಿಕಾರ ಗೌರವ ಸ್ಥಾನಮಾನಗಳಿಗೆ ಬಡಿದಾಡುವ ಕಾಲ ದೂರ ದೂರ ಹೋಯಿತು. ಜನತೆಯ ದೆಸೆಯಿಂದಾಗಿ ನೀವು ಇಂತ ಮನ್ನಣೆಗೆ ಬಂದಿರಿ. ಅದರಿಂದಾಗಿ ನಿಮ್ಮೆದಿರು ಮೊದಲು ಜನತೆಯ ವಿಚಾರ. ನಂತರ ನಿಮ್ಮ ಪಕ್ಷ ಪಂಗಡಗಳ ವಿಚಾರ. ಹೀಗೆ

ಹೇಳುವಂದು ಜನತೆಯು ಧ್ವನಿಯನ್ನೇ ನಾನೀಗ ಪ್ರತಿಧ್ವನಿಸುತ್ತಿದ್ದೇನೆಂದು ತಿಳಿದಿದ್ದೇನೆ. ನಾಡಿನ ಜೀವ ಜೀವಾಳದ ಪ್ರಶ್ನೆಯಾದ ಕರ್ನಾಟಕ ಪ್ರಾಂತೀಕರಣದ ಪ್ರಶ್ನೆಯನ್ನು ಎಷ್ಟು ಮಾತ್ರಕ್ಕೂ ನೀವು ಮುಂದೆ ಹಾಕಲಾಗದು. ಮುಖಂಡರು ಜನತೆಯ ಆದೇಶವನ್ನೇ ಲಕ್ಷಿಸಿ ನಡೆಯಬೇಕಾಗುವದು. ಹಾಗೆ ನಡೆಯದೆ ಹೋದಲ್ಲಿ ಮುಖಂಡತ್ವಕ್ಕೆ ಎರವಾಗುವುದೊಂದೆ ಬಾಕಿ. ಆಗ ಜನತೆಯು ಇದಿರು ನಿಮ್ಮನ್ನು ನಂಬಬೇಕೋ ಬೇಡವೊ ಎಂಬ ಪ್ರಶ್ನೆಯೂ ಬಂದು ನಿಲ್ಲುವುದು.

'ಗೆಳೆಯರೇ' ಎಂದು ನಿಮ್ಮನ್ನು ಸಂಭೋದಿಸಿ ಕರೆಯುವ ನಾನು ಕಳಕಳಿಯ ಮಾತೊಂದನ್ನು ಹೇಳಬಯಸುತ್ತೇನೆ. ಸತ್ಯವನ್ನು ಎತ್ತಿ ಹಿಡಿಯುವ ಕಾಲವೀಗ ಮುನ್ನುಗ್ಗಿ ನಿಮ್ಮೆಡೆಗೆ ಬಂದಿದೆ. ದೇವರಲ್ಲಿ ವಿಶ್ವಾಸವನ್ನಿಟ್ಟು ಮನೆಗೆ ಬಂದ ಭಾಗ್ಯಲಕ್ಷ್ಮಿಯನ್ನು ಬರಮಾಡಿಕೊಳ್ಳಿರಿ.

---

# ಪರ್ವತ ಪ್ರಸವ !

ಗದುಗಿನಲ್ಲಿ ಕ. ಪ್ರಾಂ. ಕಾಂಗ್ರೆಸ್ಸಿನ ಕಾರ್ಯವಾಹಕ ಮಂಡಲಿ ಕೂಡಿತು. ಸಭೆ ಅವಸರದಿಂದಲೇ ಕೂಡಿತು. ಕಾರ್ಯವಾಹಕ ಮಂಡಲಿಯ ಇತಿಹಾಸದಲ್ಲಿಯೇ ಅದೊಂದು ಐತಿಹಾಸಿಕ ಸಭೆ. ಅದರ ಮುಂದಿನ ಸಮಸ್ಯೆಯೇ ಅಷ್ಟು ಮಹತ್ವವುಳ್ಳುದಾಗಿದ್ದಿತು.

ಕನ್ನಡಿಗರ ಜೀವ ಜೀವಾಳದ ಸಮಸ್ಯೆಯಾದ ಏಕೀಕರಣದ ಬಗೆಗೆ ಹೈ ಕಮಾಂಡು ಹೊರಡಿಸಿದ ಕಠೋರವಾದ ನಿರ್ಣಯವನ್ನು ಪರಿಶೀಲಿಸುವುದೇ ಸಭೆಯ ಮುಂದಿನ ಮಹತ್ವದ ಕಾರ್ಯ. ಸದಸ್ಯರು ಬಂದರು. ಒಂದು ಇಡಿಯ ಹಗಲು, ಇಡಿಯ ರಾತ್ರಿಯೆಲ್ಲ ಅವರು ಕುಳಿತು ಚರ್ಚಿಸಿದರು, ಸಮಸ್ಯೆಯನ್ನು ಪರಿಶೀಲಿಸಿದರು. ಕೊನೆಗೆ ಆದದ್ದು ಪರ್ವತ ಪ್ರಸವವೇ ! ಬೆಟ್ಟ ಇಲಿಯನ್ನು ಹೆತ್ತಿತು. 'ಬದುಕಬೇಕು ಇಲ್ಲವೆ ಸಾಯಬೇಕು' ಎಂಬ ಮಂತ್ರ ಎಲ್ಲಿ ಮಾಯವಾಯಿತೋ ಏನೋ !

ನಾಯಕರನ್ನು ನಂಬಿ ಕುಳಿತಿದ್ದ ಲಕ್ಷೋಪಲಕ್ಷ ಕನ್ನಡಿಗರು ವಂಚಿತರಾದರು. ಅವರ ಕನಸು ಪುಡಿಪುಡಿಗುಟ್ಟಿತು, ಮಣ್ಣಿನಲ್ಲಿ ಮಣ್ಣಾಗಿ ಹೋಯಿತು. ಪ್ರಾರ್ಥನೆ ಅರಣ್ಯ ರೋದನವಾಯಿತು. ನಂಬುಗೆ ಕೆಡಿಸಿತು. ಮನೆ ಗುಡಿಸಲುಗಳಲ್ಲಿ ಹುಬ್ಬುಗೈ ಹಚ್ಚಿಕೊಂಡು ನಾಯಕರ ಸಂದೇಶದ ಕಡೆಗೆ ಆಶಾಪೂರ್ಣ ದೃಷ್ಟಿಯಿಂದ ನೋಡುತ್ತಲಿದ್ದ ಕನ್ನಡಿಗರು ಕೊನೆಗೂ ನಿರಾಶೆಗೀಡಾದರು. ಪ್ರಸಂಗ ಬಂದರೆ ಬಲಿದಾನಕ್ಕೂ ಸಿದ್ಧವಾಗಿದ್ದ ಜನತೆಗೆ ಗದುಗಿನ ಕ. ಪ್ರಾಂ. ಕಾಂಗ್ರೆಸ್ಸಿನ ಕಾರ್ಯವಾಹಕ ಮಂಡಲಿಯ ನಿರ್ಣಯ 'ಬರೀ ಬಿರುಗಾಳಿ. ಮಳೆ ಹೋಯಿತು' ಎಂದು ಹೇಳಿತು.

ಗದುಗಿನ ಸಭೆಯ ಕಾರ್ಯಕಲಾಪಗಳು ಪ್ರಾರಂಭವಾಗುವ ಒಂದು ತಾಸಿನ ಹಿಂದೆ ನಾನು ಬಾಗಿಲುಕೋಟೆಯಲ್ಲಿದ್ದೆ. ಅಲ್ಲಿನ ಕಾರ್ಯ ಕಲಾಪಗಳನ್ನು ನಿರೀಕ್ಷಿಸುವುದಕ್ಕೆ ನಾನು ಹೋಗಬೇಕಿದ್ದಿತು. ಅದಕ್ಕೂ ಮುನ್ನ ಬಾಗಿಲುಕೋಟೆಯಲ್ಲಿ ನಾನು ಕೂಲಿಕಾರರನ್ನು ಸಂದರ್ಶಿಸಿದೆ

ವಕೀಲರು, ಶಿಕ್ಷಕರು, ವಿದ್ಯಾರ್ಥಿಗಳು, ಯುವಕರು—ಕನ್ನಡ ಸಮಾಜವನ್ನು ಪ್ರತಿನಿಧಿಸುವ ಬಳಗವನ್ನೆಲ್ಲ ನಾನು ಕಂಡು ವಿಚಾರ ವಿನಿಮಯ ಮಾಡಿದೆ. ಅವರ ಹೃದಯದಲ್ಲಿ ಎಂತೆಂತಹ ಆಶೋತ್ತರಗಳಿದ್ದವೆಂಬುದನ್ನು ಏನು ಹೇಳಲಿ ? ಗದುಗಿಗೆ ನಾನು ಹೋಗುತ್ತೇನೆಂಬುದನ್ನು ಅವರಿಗೆ ತಿಳಿಸಿದಾಗ ಅವರು ನನಗೆ ನೂರೊಂದು ಪ್ರಶ್ನೆಗಳನ್ನು ಕುತೂಹಲಿಗಳಾಗಿ ಕೇಳಿದರು. "ಕ. ಪ್ರಾಂ. ಕಾಂಗ್ರೆಸ್ಸಿನ ಕಾರ್ಯವಾಹಕಮಂಡಲಿ ನಾಡಿಗೆ ಮಾರ್ಗ ದರ್ಶನ ಮಾಡಬಹುದೆ ? ಹೈಕಮಾಂಡಿನ ನಿರ್ಣಯವನ್ನು ಭಂಗಿಸಿ ಅವರು ತಮ್ಮ ಕೈಯಲ್ಲಿ ಸೂತ್ರಗಳನ್ನು ತೆಗೆದುಕೊಳ್ಳಬಹುದೇ ?" "ಕನ್ನಡಿಗರ ಹೃದಯ ಸ್ಪಂದನವನ್ನು ನಾಯಕರು ಅರಿತುಕೊಂಡಿದ್ದಾರೆಯೆ?" ಇದೇ ತೆರನಾಗಿ ಪ್ರಶ್ನೆಗಳನ್ನು ಹುಡುಕುವುದಕ್ಕಾಗಿ ಅವರು ಒಂದೇ ಸಮನೆ ಹಾತೊರೆಯುತ್ತಲಿದ್ದರು. ಪಾಪ! ಆಗ ಅವರು ಇನ್ನೂ ನಂಬಿರಲಿಲ್ಲ. ಮುಖಂಡರು ತಮ್ಮನ್ನು ನಡುನೀರಿನಲ್ಲಿ ಕೈ ಬಿಡುವರೆಂದು ಅವರಿಗಿನ್ನೂ ತಿಳಿದಿರಲಿಲ್ಲ.

ಬಾಗಿಲುಕೋಟೆಯ ಜನತೆ ಕೇಳಿದ ಪ್ರಶ್ನೆಗಳು ಇನ್ನೂ ನನ್ನ ಕಿವಿಯಲ್ಲಿ ಪ್ರತಿಧ್ವನಿಸುತ್ತಿವೆ. "ಕರ್ನಾಟಕದ ನಿರ್ಮಾಣಕ್ಕಾಗಿ ಏನು ಬೇಕಾದರೂ ಒಮ್ಮೆ ಆಗಿ ಬಿಡಲಿ. ಆ ದಾರಿಯಲ್ಲಿ ಹೈಕಮಾಂಡು ಅಡ್ಡ ಬಂದರೆ ಕರ್ನಾಟಕದಲ್ಲಿ ಕಾಂಗ್ರೆಸ್ಸಿನ ಸಮಾಧಿ ಸಿದ್ಧವಾಗುವುದೆಂದು ಮುಖಂಡರು ಹೇಳಿ ಬಿಡಲಿ. ಕಾಂಗ್ರೆಸ್ಸನ್ನು ಬಿಟ್ಟು ಹೊರಗೆ ಬರಲು ನಾವು ಸಿದ್ಧರಿದ್ದೇವೆ ಸತ್ಯಾಗ್ರಹ ಸಿದ್ಧತೆಯನ್ನೂ ನಡಸಿಯೇ ಬಿಡೋಣ. ಏನು ಬರುತ್ತದೋ, ಬರುವ ಕಾಲಕ್ಕೊಮ್ಮೆ ಬಂದು ಬಿಡಲಿ."

ತಾಯ್ನಾಡಿನ ಪ್ರೇಮದಿಂದ ತುಂಬಿ ತುಳುಕುತ್ತಿರುವ ಜನಾಂಗ ಅದು. ಕನ್ನಡಿಗರು ಅಭಿಮಾನಿಗಳು, ಉಗ್ರರು, ಗುಣಾಗ್ರಿಗಳು. ಅವರಿಂದು ಸರಿಯಾದ ಮುಖಂಡರನ್ನು ಆರಿಸಿಕೊಳ್ಳದೆ ತಪ್ಪು ಮಾಡಿದರು. ಕ. ಪ್ರಾಂ. ಕಾಂಗ್ರೆಸ್ಸಿನ ಕಾರ್ಯವಾಹಕ ಮಂಡಲಿ ಅವರ ಹೃದಯದಲ್ಲಿ ಚೂರಿಯನ್ನಿಟ್ಟು ಇರಿಯಿತು.

ಧೀರವಾದ ಮಾರ್ಗವನ್ನು ಹಿಡಿದು ಧೀರರಾಗಿ ಮುನ್ನಡೆಯಿರೆಂದು ಆದೇಶಕೊಡುವ ಬದಲು ಕ. ಪ್ರಾಂ. ಕಾಂಗ್ರೆಸ್ಸಿನ ಕಾರ್ಯವಾಹಕ

ಮಂಡಲಿ ಹೆಂಬೇಡಿಯಂತೆ ಹಿಂದುಳಿದು ಜನತೆಗೆ ತಪ್ಪು ಮಾರ್ಗದರ್ಶನ ಮಾಡಿತು. ಕ. ಪ್ರಾಂ. ಕಾಂಗ್ರೆಸ್ಸಿನ ಸದಸ್ಯರೆಲ್ಲರೂ ಕೂಡಿ ಈ ವಿಷಯದಲ್ಲಿ ಯೋಚನೆ ಮಾಡಿ ಸಲಹೆ ಕೊಡಲಿ ಎಂದು ಹೇಳಿ ತನ್ನ ಮೇಲಿನ ಹೊಣೆಯನ್ನು ಹಾರಿಸಿಕೊಂಡಿತು.

ಗಡುಗಿನ ಸಭೆ ಗೌಪ್ಯವಾಗಿಯೇ ಕೂಡಿತ್ತು. ಕಾರ್ಯಕಲಾಪಗಳು ರಹಸ್ಯವಾಗಿಯೇ ನಡೆದವು. ಒಟ್ಟು ಹದಿನೈದು ಸದಸ್ಯರಲ್ಲಿ ಹತ್ತು ಸದಸ್ಯರು ಮಾತ್ರ ಬಂದಿದ್ದರು. ಸುಮಾರು ೨೦ ಜನರನ್ನು ಆಮಂತ್ರಿಸಲಾಗಿದ್ದಿತು. ಅವರಲ್ಲಿ ಶ್ರೀ. ರಂ. ರಾ. ದಿವಾಕರ್, ಶ್ರೀ. ಎಂ. ಪಿ ಪಾಟೀಲ, ಕರ್ನಾಟಕದ ಶಾಸನಾ ಸಭಾ ಸದಸ್ಯರು, ಉಪಮಂತ್ರಿಗಳೇ ಇದ್ದರು. ಮಧ್ಯಾಹ್ನ ಮೂರು ಘಂಟೆಗೆ ಕೂಡಬೇಕಾಗಿದ್ದ ಸಭೆ ೪-೩೦ ಕ್ಕೆ ಕೂಡಿತು. ಪತ್ರಿಕೋದ್ಯಮಿಗೆ ಒಳಗೆ ಹೋಗಲು ಅಪ್ಪಣೆ ಇರಲಿಲ್ಲ.

ಸಭೆಯ ಪ್ರಾರಂಭದಲ್ಲಿ ಶ್ರೀ. ನಿಜಲಿಂಗಪ್ಪನವರು ಸದ್ಯದ ಪರಿಸ್ಥಿತಿಯ ವರೆಗೆ ಸಾಗಿ ಬಂದ ಕಾರ್ಯಕಲಾಪಗಳ ವಿವರವನ್ನೆಲ್ಲ ಸಿಂಹಾವಲೋಕನ ಕ್ರಮದಿಂದ ತಿಳಿಸಿ ಹೇಳಿದರೆಂದು ನನಗೆ ಗೊತ್ತಾಯಿತು. ಕಾಂಗ್ರೆಸ್ ವರ್ಕಿಂಗ ಕಮಿಟಿ ಸಭೆಯಲ್ಲಿ ಏನು ನಡೆಯಿತೆಂಬುದನ್ನು ಅವರು ಇದ್ದಂತೆ ವರದಿಯನ್ನೊಪ್ಪಿಸಿದರು. ಆಮೇಲೆ ಸಭೆಯಲ್ಲಿ ಕಾಳಗ ಪ್ರಾರಂಭವಾಯಿತು. ರಂ. ರಾ ದಿವಾಕರರ ಆಗಮನ ಉರಿಯುತ್ತಲಿರುವ ಸಭೆಗೆ ಉರುವಲವನ್ನು ತಂದಂತಾಗಿದ್ದಿತು. ಯಾಕೋ ಏನೋ ದಿವಾಕರರ ಮುಖದ ಮೇಲೆ ಜೀವವೇ ಇರಲಿಲ್ಲ. ಮಾತುಗಾರರ ಹರಿತಾದ ಬಾಣದ ಇರಿತವೊಂದು ಕಡೆ. ಸೋಬಾನ ಹೇಳುತ್ತ ಮೈಯನ್ನೆಲ್ಲ ಚುಚ್ಚುವ ಸೊಳ್ಳೆಗಳು ಉಪದ್ರವವಿನ್ನೊಂದುಕಡೆ. ಅಧ್ಯಕ್ಷರ ಮಗ್ಗುಲೆಡೆಯಲ್ಲಿ ಕುಳಿತ ದಿವಾಕರರ ದೃಶ್ಯ ಪ್ರೇಕ್ಷಣೀಯವಾಗಿದ್ದಿತು. ಕ. ಪ್ರಾಂ. ಕಾಂಗ್ರೆಸ್ಸಿನ ಕಾರ್ಯವಾಹಕ ಮಂಡಲಿಯಲ್ಲಿ ದಿವಾಕರರಿಗೆ ಏನೂ ಸ್ಥಾನವಿಲ್ಲ. ಆದರೂ ಈ ಮನುಷ್ಯ ಗೊಂದಲವನ್ನೆಬ್ಬಿಸದೆ ಹೋಗಲಾರನೆಂದು ಸಭೆಯಲ್ಲಿ ಕೆಲವರು ಗುಸು ಗುಸು ಮಾತನಾಡುತ್ತಲಿದ್ದರು. ಇಂತ ಸಂದಿಗ್ಧವೂ, ವಿವಂಚನಾಸ್ಪದವೂ ಆದ ವಾತಾವರಣದಲ್ಲಿ ದುರ್ದೈವೀ ಸಭೆ ಕೂಡಿದ್ದಿತು. !

ತೋಪುಗಳು ಹಾರತೊಡಗಿದ್ದವು. ಎಲ್ಲಾ ದಿವಾಕರರ ಕಡೆಗೆ

ವಿಜಾಪುರದ ಶಾಸನಸಭಾಸದಸ್ಯರಾದ ಶ್ರೀ. ಅಂಬಲಿಯವರು ಮೊದಲನೆಯ ತೋಫು ಹಾರಿಸಿದರು. ಎಡಕ್ಕೆ ಬಲಕ್ಕೆ ತೋಫುಗಳನ್ನು ಇರಿಸಿಕೊಂಡು ದಿವಾಕರರ ಮೇಲೆ ಒಂದೇಸವನೆ ಆಹ್ವಾನವನ್ನೆಸೆಯುತ್ತಲಿದ್ದರು. ದಿವಾಕರರು ಪತ್ರಿಕೆಗಳಿಗೆ ಪ್ರಕಟನೆ ಕೊಡುವ ಅಗತ್ಯವೇನಿದ್ದಿತು ? ಕ. ಪ್ರಾಂ. ಕಾಂಗ್ರೆಸ್ಸಿನ ಕಾರ್ಯವಾಹಕ ಮಂಡಲಿ ಸಭೆ ಸೇರುವ ಮುನ್ನ ಅನಪೇಕ್ಷಿತವಾದ ಈ ಸಲಹೆ ಯಾರಿಗೆ ಬೇಕಾಗಿದ್ದಿತು ?

ಎಲ್ಲರೂ ಇದೇ ಪ್ರಶ್ನೆಯನ್ನು ಕೇಳುವವರೇ. ಇದನ್ನೇ ಮುಂದೆಮಾಡಿಕೊಂಡು ದಿವಾಕರರಿಗೆ ಎಲ್ಲರೂ ಸವಾಲು ಹಾಕುವವರೇ

ದಿವಾಕರ್ ಸಮಯ ಕಾಯ್ದುಕೊಂಡು ಕುಳಿತಿದ್ದರು. ಅವರ ಸಮಯ ಬಂದಿತು. ಎದ್ದು ನಿಂತರು. ಪ್ರತಿಪಾಲಿಸತೊಡಗಿದರು.

ಮೊದಲನೆಯದಾಗಿ ಕರ್ನಾಟಕದಲ್ಲಿ ಕ. ಪ್ರಾಂ. ಕಾಂಗ್ರೆಸ್ಸಿನ ನಿರ್ಣಯದ ಪ್ರತಿಕ್ರಿಯೆಯನ್ನು ತಿಳಿದುಕೊಳ್ಳುವದು ತನಗೆ ಬೇಕಿದ್ದಿತೆಂದು ಅವರು ಹೇಳಿದರು.

ಎರಡನೆಯದಾಗಿ ರಾಜೀನಾಮೆಯನ್ನು ಸಲ್ಲಿಸುವುದಕ್ಕಾಗಿ ತಾವು ನಿಶ್ಚಯಿಸಿದ್ದಾಗಿಯೂ, ರಾಜೀನಾಮೆಯನ್ನು ಕೊಡುವುದಕ್ಕಾಗಿ ಮುಖ್ಯ ಪ್ರಧಾನಿ ಪಂಡಿತನೆಹರೂರವರನ್ನು ಸಂದರ್ಶಿಸಿದಾಗ ಅವರು "ದಿವಾಕರ್ ವಿಚಾರ ಮಾಡಿರಿ. ಕೇಂದ್ರ ಪಾರ್ಲಿಮೆಂಟಿನ ಸಮಿತಿಯವರಿಗೆ ನೀವು ರಾಜೀನಾಮೆ ಪತ್ರ ಕಳಿಸಬೇಕಾಗುವುದು. ಅದರಲ್ಲೇನೂ ಸಂಶಯವಿಲ್ಲ ನಿಮ್ಮ ರಾಜೀನಾಮೆ ಸ್ವೀಕೃತವಾಗುವುದು. ನಿಮ್ಮ ಶಾಸನಸಭಾಸದಸ್ಯರು ಇನ್ನೂ ರಾಜೀನಾಮೆ ಕೊಡುವುದಕ್ಕೆ ಅಪ್ಪಣೆ ಮಾತ್ರ ಕೇಳಿದ್ದಾರೆ" ಎಂದು ಹೇಳಿದರೆಂದು ತಿಳಿಸಿದರು.

ಹೀಗೆ ಚರ್ಚೆ ನಡೆದಾಗ ಇದ್ದಕ್ಕಿದ್ದಂತೆ ಸಭೆಯಲ್ಲಿ ಕಾವೇರ ತೊಡಗಿತು. ಪರಿಸ್ಥಿತಿ ವಿಪರೀತಕ್ಕೆ ಹೋಗುವ ಸಂಭವ ಕಾಣಿಸತೊಡಗಿತು. ದಿವಾಕರ್ ಸಭೆಯನ್ನು ಬಿಟ್ಟು ಹೋಗುವುದಾಗಿ ಹೆದರಿಸಿದರು. ಅಧ್ಯಕ್ಷರ ಕೋಮಲ ಹಸ್ತ ಈ ಮಧ್ಯದಲ್ಲಿ ಮುಂದೆ ಬರದಿದ್ದರೆ ಸಭೆಯಲ್ಲಿ ಅಕರಾಳ ವಿಕರಾಳ ಸನ್ನಿವೇಶಗಳು ತಲೆಹಾಕದೆ ಬಿಡುತ್ತಿರಲಿಲ್ಲ !

ಶ್ರೀಗಳಾದ ಹಳ್ಳೀಕೇರಿ, ದುಬೆ, ದೊಡ್ಡಮನಿಯವರು ಕ. ಪ್ರಾಂ.

ಕಾಂಗ್ರೆಸ್ಸಿನ ನಿರ್ಣಯವನ್ನು ಬಲವಾಗಿ ಸಮರ್ಥಿಸುತ್ತ ವರ್ಕಿಂಗ ಕಮೀಟಿಯ ತೀರ್ಮಾನವನ್ನು ಉಗ್ರವಾಗಿ ಖಂಡಿಸಿದರು. ಶ್ರಿ ಎಂ. ಪಿ. ಪಾಟೀಲ ಮತ್ತು ಕರಮರಕರ ಅವರು ಹೈ ಕಮಾಂಡಿನ ನಿರ್ಣಯವನ್ನು ಅಷ್ಟೇ ಕಠೋರವಾಗಿ ಟೀಕಿಸಿದರು. ಮೈಸೂರಿನ ಪ್ರತಿನಿಧಿಗಳು ಕ. ಪ್ರಾಂ. ಕಾಂಗ್ರೆಸ್ಸಿನ ಗೊತ್ತು ವಳಿಯನ್ನು ವಿರೋಧಿಸುವವರನ್ನು ಆಹ್ವಾನಿಸಿದರು. ಈ ಕಾಲದಲ್ಲೆಲ್ಲ ಏನೂ ಮಾತನಾಡದೆ ಸಭೆಯ ಒಂದು ಮೂಲೆಯಲ್ಲಿ ಮೈಸೂರಿನ ಒಬ್ಬ ಮಹಿಳಾ ಪ್ರತಿನಿಧಿ ಸಭೆಯ ಕಾರ್ಯಕಲಾಪಗಳನ್ನು ನೋಡುತ್ತ ಸುಮ್ಮನೆ ಕುಳಿತಿದ್ದರು. ಅವರೇ ಬಳ್ಳಾರಿ ಸಿದ್ದಮ್ಮ.

ಸಿದ್ದಮ್ಮನವರು ಸಭೆಯ ವಾತಾವರಣವನ್ನು ನೋಡಿ ಜಿಗುಪ್ಸೆ ಗೊಂಡಂತೆ ನನಗೆ ಹಿಂದುಗಡೆಯಿಂದ ತಿಳಿದು ಬಂದಿತು. ಈ ಸಭೆ ಒಂದು ನಾಟಕ ಪ್ರಹಸನವೆಂದು ಅವರು ಹೇಳಿದರು.ಸಭಿಕರು ಬಿರುಸು ಮಾತುಗಳನ್ನು ಉಪಯೋಗಿಸುವದರಲ್ಲಿಯೇ ವೇಳೆ ಕಳೆದು ಏನನ್ನೂ ಸಾಧಿಸಲಾರದೆ ಹೋದ ಸಂಗತಿ ಸಿದ್ದಮ್ಮನವರಿಗೆ ಖೇದವನ್ನುಂಟು ಮಾಡಿತ್ತು.

ಮನೆಯ ಕಡೆಗೆ ತೆರಳುವ ಮುನ್ನ ಮೈಸೂರಿನ ಮಹಿಳಾ ಪ್ರತಿನಿಧಿಯೊಂದಿಗೆ ನಾನು ಕೆಲವು ಮಾತುಗಳನ್ನಾಡಿದೆ. ಭಾರವಾದ ಹೃದಯದೊಂದಿಗೆ ಮೈಸೂರಿಗೆ ಮರಳುತ್ತೇನೆಂದು ಸಿದ್ದಮ್ಮ ಹೇಳಿದರು. ಎಂತ ನೋವು !

ಕ. ಪ್ರಾಂ ಕಾಂಗ್ರೆಸ್ಸಿನ ಅಂಜುಬುರುಕ ನಿರ್ಣಯದಿಂದ ತಾವು ಬಹಳ ನಿರಾಶಗೊಂಡಿದ್ದೇವೆಂದು ಮೈಸೂರಿನ ಪ್ರತಿನಿಧಿಗಳು ನನಗೆ ಹೇಳಿದರು. ಕನ್ನಡಿಗರ ಬದುಕಿನ ಭಾಗ್ಯವಾಗಿದ್ದ ಸಮಸ್ಯೆಯನ್ನು ಕಾರ್ಯವಾಹಕ ಮಂಡಲಿಯು ಧೈರ್ಯದಿಂದ ಇದಿರಿಸಬಹುದೆಂದು ಅವರು ನಂಬಿದ್ದರು. ಆದರೆ ಹಾಗಾಗಲಿಲ್ಲ. ಅವರ ಕಣ್ಣದಿರು ನಿರಾಶಾವಾದ ಕವಿದಿತ್ತು.

ಒಂದು ಮಾತಿನಲ್ಲಿ ಹೇಳಬೇಕಾದರೆ ಕ. ಪ್ರಾಂ. ಕಾಂಗ್ರೆಸ್ಸಿನ ಕಾರ್ಯ ವಾಹಕ ಮಂಡಲಿ ಅರಾಜಕತೆಯಲ್ಲಿ ಕರಗಿ ಹೋಯಿತು. ಅಂದು ಬಹು ಸಂಖ್ಯಾಕ ಸದಸ್ಯರು ಮನಸ್ಸು ಮಾಡಿದ್ದರೆ ಈ ಅರಾಜಕತೆ ತಪ್ಪ ಬಹುದಾಗಿದ್ದಿತು. ಕ. ಪ್ರಾಂ. ಕಾಂಗ್ರೆಸ್ಸು ಧೈರ್ಯಮಾಡಿ ತಮ್ಮ ನಿರ್ಧಾರಕ್ಕೆ ಅಂಟಿಕೊಳ್ಳುವುದಕ್ಕೆ ಹಚ್ಚಲು ಅವರಿಗೆ ಬರಬಹುದಿದ್ದಿತು. ಈ ನಾಟಕದಲ್ಲಿ ಅಲ್ಪ ಸಂಖ್ಯಾಕರು ಬಹಳ ಮಹತ್ವದ ಪಾತ್ರವನ್ನಾಡಿದರು.

ಕ. ಪ್ರಾಂ. ಕಾಂಗ್ರೆಸ್ಸಿನ ಒಳಗೂ ಹೊರಗೂ ಅಲ್ಪಸಂಖ್ಯಾಕರರಾದ ಪ್ರತಿಗಾಮಿಗಳು ಬಹು ಸಂಖ್ಯಾಕರನ್ನು ವಂಚಿಸುವಲ್ಲಿ ಯಶಸ್ಸನ್ನು ಪಡೆಯುತ್ತಿರುವ ಸಂಗತಿ ನನಗೆ ಅರ್ಥವಾಗದೆ ಇರಲಿಲ್ಲ. ದುರ್ದೈವ! ಪರ್ವತದ ಹೆರಿಗೆಯನ್ನು ನಿರೀಕ್ಷಿಸುತ್ತಿರುವವರನ್ನೆಲ್ಲ ಇಲಿಯು ವಂಚಿಸಿತು. !

ಬಹು ಸಂಖ್ಯಾಕ ಸದಸ್ಯರು ಬಹು ಮತದಿಂದ ಅಂದು ಏಕೆ ಗೆಲ್ಲದೆ ಹೋದರು. ?ಏಕೀಕರಣ ಪಶ್ನೆಯನ್ನೇಕೆ ಮುಂದೆ ಹಾಕಿದರು? ಇದು ಕನ್ನಡಿಗರು ಕೇಳುವ ಪ್ರಶ್ನೆ! ಅಗೋ, ಕರ್ನಾಟಕದ ಬಾನನ್ನು ಕತ್ತಲು ಕವಿದಿದೆ. ಆಸೆಯ ಕೋಲ್ಮಿಂಚೇ ಸುಳಿಯಲೊಲ್ಲದು. ದಾರಿ ಹೇಗೆ ಕಂಡೀತು ?

---

# ನಮಸ್ಕಾರ....... !

ಕರ್ನಾಟಕದಲ್ಲಿ ಎಂಟು ವಾರ ಬಿಟ್ಟೂ ಬಿಡದೆ ತಿರುಗಾಡಿ ನಾನೀಗ ಬಂದ ದಾರಿ ಹಿಡಿದು ಹೋಗುತ್ತಿದ್ದೇನೆ. ಬಂದ ದಾರಿಗೆ ಸುಂಕವಿಲ್ಲೆಂಬಂತೆ ದುರ್ದೈವೀ ಕರ್ನಾಟಕದಂತೆಯೇ ನನ್ನ ಗತಿಯೂ ಆಗಿದ್ದರೆ ಏನು ಆಶ್ಚರ್ಯ?

ಹೃದಯವನ್ನು ವಿಶ್ವದಂತೆ ವಿಶಾಲವಾಗಿರಿಸಿಕೊಂಡು ಕರುನಾಡಿನ ಪುಣ್ಯಭೂಮಿಯನ್ನು ಸಂದರ್ಶಿಸುವ ಸೌಭಾಗ್ಯ ನನ್ನದಾಯಿತು. ಹಳ್ಳಿ ಪಟ್ಟಣಗಳನ್ನು ನೋಡಿಕೊಂಡು ಬಂದೆ. ಬಡವರು ಸಿರಿವಂತರು ವಿದ್ಯಾರ್ಥಿಗಳು ವಕೀಲರು ವರ್ತಕರು ಕೂಲಿ ಕುಂಬಳಿಗಳನ್ನು ಕನ್ನಡ ಸಮಾಜವನ್ನು ಪ್ರತಿನಿಧಿಸುವ ಎಲ್ಲ ಬಳಗದವರನ್ನು ಕಂಡು ಬಂದೆ. ಮೈಸೂರು, ಕೊಡಗು, ಮಂಗಳೂರ, ಕಾರವಾರ, ಬೆಳಗಾಂವಿ, ಧಾರವಾಡ, ವಿಜಾಪುರ, ಬಳ್ಳಾರಿ, ರಾಯಚೂರ, ಖಂಡ ಖಂಡವಾದ ಹಿಂದುಸ್ಥಾನದಂತೆಯೇ ಚೂರುಚೂರಾಗಿರುವ ಕನ್ನಡನಾಡಿನ ಎಲ್ಲಾ ಭಾಗಗಳಲ್ಲಿ ತಿರುಗಾಡಿದೆ. ಅದೊಂದು ಅನುಭವ ಸಂಪತ್ತು. ಅದೇ ಅಕ್ಷಯ ನಿಧಿ.

ಕರ್ನಾಟಕದ ಸಮಗ್ರ ಬದುಕೇ ಕಾಯ್ದು ಕಡಾವಿಗೆಯಂತಾಗಿದೆ. ಎಲ್ಲಿ ನೋಡಿದರೂ, ಯಾರ ಬಾಯಿಂದ ಕೇಳಿದರೂ ಕರ್ನಾಟಕ ಪ್ರಾಂತೀಕರಣದ ಮಾತೇ ಮಾತು. ಅಧಿಕಾರ ರಾಜಕಾರಣದ ಅರ್ಥವನ್ನು ಅರಿಯದ ಅಜ್ಞರು ಅತ್ಯಂತ ಆಸ್ಥೆಯಿಂದ ಈ ಬಗೆಗೆ ಮಾತನಾಡುತ್ತಿರುವುದು ಕಂಡು ಬರುತ್ತಿದೆ. ಇದರಿಂದ ಕರ್ನಾಟಕದ ಪರಿಸ್ಥಿತಿ ಎಷ್ಟು ಪ್ರಕ್ಷುಬ್ಧವಿದೆಯೆಂಬುದು ಸಹಜವಾಗಿಯೆ ತಿಳಿಯುವುದು.

ಧಾರವಾಡ, ವಿಜಾಪುರ, ಬಳ್ಳಾರಿ, ಜಿಲ್ಹೆಯ ಜನತೆ ಏಕೀಕೃತ ಕರ್ನಾಟಕದ ನಿರ್ಮಾಣಕ್ಕಾಗಿ ಕಂಕಣ ಕಟ್ಟಿ ನಿಂತಿದೆ. ಮೈಸೂರನ್ನೊಳಗೊಂಡ ಬೃಹತ್ ಕರ್ನಾಟಕದ ರಚನೆಗಾಗಿ ಅವರು ಬಹಳ ವರುಷಗಳಿಂದ ಅವ್ಯಾಹತವಾಗಿ ಹೋರಾಡುತ್ತ ಬಂದಿದ್ದಾರೆ. ಆದರೂ ಅವರ ಕನಸು ಕನಸಾಗಿಯೆಉಳಿಯಿತು. ಜನತೆ ಸಿಡಿಮಿಡಿಗೊಂಡರು. ಹೈ ಕಮಾಂಡು ಅವರ ಟೀಕೆಗೆ ಈಡಾಗ ಬೇಕಾಗಿ ಬಂದಿತು. ಕ. ಪ್ರಾಂ. ಕಾಂಗ್ರೆಸ್ಸು, ಕರ್ನಾಟಕದ

ಮುಖಂಡರನ್ನೂ ಅವರು ಆಹ್ವಾನಿಸದೆ ಬಿಡಲಿಲ್ಲ. ಜನತೆಯು ಸಿಟ್ಟಿ ಜ್ವಾಲಾಮುಖಿಯಂತೆ ಇನ್ನೂ ಸ್ಫೋಟವಾಗಿಲ್ಲ. ಆದರೆ ಒಳಗಿಂದೊಳಗೇ ಅದು ಹೊತ್ತುತ್ತಲಿದೆ. ನಾಯಕರನ್ನು ಅವರು ಬೈಯುವ ರೀತಿಯನ್ನು ನಾನು ಒಪ್ಪುತ್ತಿಲ್ಲವಾದರೂ, ನಿಷ್ಕಲ್ಮಿಷವಾದ ಅವರ ಪ್ರಾಂತಾಭಿಮಾನ ವನ್ನು ನಾನು ಕೊಂಡಾಡದೆ ಇರಲಾರೆನು. ಅಂತಹ ನಿರ್ಮಲ ಪ್ರೇಮವನ್ನು ಯಾರು ಅಲ್ಲಗಳೆದಾರು?

ಬೆಳಗಾವಿ, ಕಾರವಾರಗಳ ಸಮಸ್ಯೆ ಬಿಕ್ಕಟ್ಟಿನ ಸಮಸ್ಯೆ ಅಲ್ಲವಾದರೂ, ಅಲ್ಲಿ ದ್ವೇಷದ ಕಿಡಿ ದುರ್ದೈವದಿಂದ ಹೊತ್ತುತ್ತಲಿದೆ. ಕನ್ನಡ ನಾಡಿನ ಗಂಡು ಮೆಟ್ಟಿನ ಪ್ರದೇಶಗಳಾದ ಬೆಳಗಾವಿ, ಕಾರವಾರಗಳಲ್ಲಿ ಉಭಯ ಪಕ್ಷ ದವರು ರಭಸದಿಂದಲೇ ಪ್ರಚಾರಕ್ಕೆ ತೊಡಗಿದ್ದಾರೆ.

ಮಂಗಳೂರಿನಲ್ಲಿ ಧಾರವಾಡ, ವಿಜಾಪೂರ, ಬೆಳಗಾವಿಗಳ ಉತ್ಸಾಹವಿಲ್ಲ. ಆದರೂ ಮಂಗಳೂರಿಗೆ ಏಕೀಕೃತ ಕರ್ನಾಟಕದ ಹಂಬಲವಿದೆ. ಕೊಡಗು ಕಣ್ಣುಮುಚ್ಚಿಕೊಂಡು ಮೈಸೂರನ್ನು ಹಿಂಬಾಲಿಸುವದು. ಹೀಗಿದ್ದರೂ ಮಂಗ ಳೂರಿನಲ್ಲಿ, ಕೊಡುಗು, ಮೈಸೂರುಗಳಲ್ಲಿ "ಒಂದೇ ಕರ್ನಾಟಕ"ದ ಚಳವಳಿ ಪ್ರಚಾರ ಬಹಳವಾಗಿ ನಡೆಯಬೇಕಾದುದು ಅವಶ್ಯವೆಂದು ನನಗನ್ನಿಸುತ್ತಿದೆ.

ಮೈಸೂರನ್ನು ಬಿಟ್ಟು ಬೃಹತ್ ಕರ್ನಾಟಕ ಪ್ರಾಂತ ನಿರ್ಮಾಣವಾಗಲಾರ ದೆಂಬ ಮಾತು ನಿಜ. ಮೈಸೂರ ಜನತೆ ಇನ್ನುಳಿದ ಕನ್ನಡ ಪ್ರದೇಶಗಳಲ್ಲಿ ಬಂದು ಕೂಡಿಕೊಳ್ಳುವುದಕ್ಕೆ ವಿರೋಧಿಸುತ್ತಾರೆಂಬ ಅಭಿಪ್ರಾಯ ಮೈಸೂ ರಿನ ಹೊರಗೆ ಕೇಳಿ ಬರುತ್ತದೆ. ಆದರೆ ೧೦೦ಕ್ಕೆ ೩೦ರಷ್ಟು ಮೈಸೂರಿ ಗರು ಲೀನೀಕರಣಕ್ಕೆ ಬೆಂಬಲ ಕೊಡುತ್ತಾರೆನ್ನುವಲ್ಲಿ ಸಂದೇಹವಿಲ್ಲ. ೧೦೦ಕ್ಕೆ ೨೫ ರಷ್ಟು ಜನರು ಈ ಬಗೆಗೆ ಏನೂ ವಿಚಾರ ಮಾಡುವದೇ ಇಲ್ಲ. ಸ್ವಾರ್ಥಲಾಲಸಿಗಳೂ, ಅಧಿಕಾರಪ್ರಿಯರೂ ಆಗಿರುವ ಇನ್ನುಳಿದ ಜನತೆ ಲೀನೀಕರಣವನ್ನು ವಿರೋಧಿಸುತ್ತಿರಬಹುದು. ಆದರೆ ಅದೇನು ಮಹಾ?

ಮೈಸೂರು ಸಂಸ್ಥಾನದಲ್ಲಿ ನನಗೆ ತಿಳಿದಂತೆ ಕೆಲವೊಂದು ವಿಶಿಷ್ಟ ಗುಂಪಿನವರು ಅಪಪ್ರಚಾರ ನಡೆಸುತ್ತ ಕರ್ನಾಟಕ ಪ್ರಾಂತೀಕರಣವನ್ನು ವಿರೋಧಿಸುತ್ತಿರುವದು ನಿಜ. ಅವರು ಕೊಡುತ್ತಿರುವ ಕಾರಣ ಇವು (೧) ಮೈಸೂರಿನಲ್ಲಿ ಕೈ ಜನ ಲೀನೀಕರಣಕ್ಕೆ ಒಪ್ಪುವದಿಲ್ಲ. (೨) ಏಕೀಕರಣದ

ವಿಷಯದಲ್ಲಿ ಸಂಸ್ಥಾನ ಕಾಂಗ್ರೆಸ್ಸಿಗಿರುವ ಅಭಿಪ್ರಾಯವನ್ನು ಮೈಸೂರು ಒಪ್ಪುವದಿಲ್ಲ. (೩) ಮೈಸೂರು ಲೀನೀಕರಣವಾದರೆ ಮೈಸೂರಿನ ಜೀವನದ ಮಟ್ಟ ಕೆಳಗಿಳಿಯುವದು. (೪) ಔದ್ಯೋಗಿಕ ಪ್ರಪಂಚದಲ್ಲಿ ಕೀರ್ತಿಯನ್ನು ಗಳಿಸಿರುವ ಮೈಸೂರು ಲೀನೀಕರಣವಾದರೆ ಅದರ ಉದ್ಯೋಗಗಳು ಕುಸಿದು ಬಿದ್ದು ಆರ್ಥಿಕ ಪರಿಸ್ಥಿತಿ ದುರ್ಬಲವಾಗುವದು. (೫) ಮೈಸೂರಿನ ಶಾಸನ ಸಭಾಸದಸ್ಯರ ಬಹುಮತ ಲೀನೀಕರಣದ ಕಡೆಗೆ ಇಲ್ಲ. (೬) ನೆರೆಯ ಪ್ರದೇಶಗಳೊಂದಿಗೆ ಮೈಸೂರು ಕೂಡಿಕೊಂಡರೆ ಮೈಸೂರ ಸರಕಾರದ ಅಸ್ತಿತ್ವವೇ ಉಳಿಯಲಾರದು.

ಲೀನೀಕರಣವನ್ನು ವಿರೋಧಿಸುವ ಕೆಲ ಮೈಸೂರಿಗರು ಕೊಡುವ ಕಾರಣಗಳು ಇವು. ಈ ಎಲ್ಲ ಕಾರಣಗಳು ಅಪ್ರಸ್ತುತ ಹಾಗೂ ಅಸಂಬದ್ಧವಾಗಿವೆಯೆಂದು ಬೇರೆ ಹೇಳುವದೇ ಬೇಡ. ಒಂದು ವೇಳೆ ಮೈಸೂರು ಸಂಸ್ಥಾನದಲ್ಲಿ ಲೀನೀಕರಣಕ್ಕಾಗಿ ಜನ-ಮತ-ಗಣನೆ ನಡೆದುದೇ ಆದರೆ ೧೦೦ಕ್ಕೆ ೩೮ ರಷ್ಟು ಜನತೆ ಲೀನೀಕರಣಕ್ಕಾಗಿ ಮತ ಕೊಡುವದೆಂದೇ ನಾನು ಹೇಳಬಲ್ಲೆ. ಸಂಸ್ಥಾನ ಕಾಂಗ್ರೆಸ್ಸು ಈ ಲೀನೀಕರಣಕ್ಕೆ ಒಪ್ಪಿಗೆಯನ್ನಿತ್ತ ಸಂಗತಿ ಇದನ್ನೇ ಎತ್ತಿ ಹೇಳುವುದಿಲ್ಲವೇ?

ಮೈಸೂರಿನ ಆರ್ಥಿಕ ಪ್ರಪಂಚವನ್ನು ಪರೀಕ್ಷಿಸಿದ ಅರ್ಥ ಶಾಸ್ತ್ರಜ್ಞನು ಲೀನೀಕರಣವಾದ ಮೈಸೂರು ಇನ್ನೂ ಪ್ರಗತಿ ಪಥದಲ್ಲಿ ನಡೆಯುವದೆಂದು ಖಂಡಿತ ಹೇಳಬಲ್ಲನು. ಲೀನೀಕರಣವನ್ನು ಮೈಸೂರಿನ ಶಾಸನ ಸಭಾಸದಸ್ಯರು ವಿರೋಧಿಸುವದೇ ನಿಜವಿದ್ದರೆ, ಆ ಶಾಸನ ಸಭಾಸದಸ್ಯರು ಜನಾಭಿಪ್ರಾಯವನ್ನು ವಂಚಿಸುತ್ತಿರುವರೆಂಬ ಸಂಗತಿ ಸೂರ್ಯಪ್ರಕಾಶದಷ್ಟು ಸ್ಪಷ್ಟವೇ ಆಗಿದೆ. ಜನಮತವನ್ನು ವಿರೋಧಿಸುವ ಶಾಸನ ಸಭಾ ಸದಸ್ಯರು ಜನತಾ ಪ್ರತಿನಿಧಿಗಳಾಗಿ ಹೇಗೆ ಉಳಿಯಬಲ್ಲರು ?

ಬೃಹತ್ ಕರ್ನಾಟಕದ ನಕ್ಷೆಯಲ್ಲಿ ಮೈಸೂರಿನ ಹೆಸರು ಮೂಡಿನಿಂತಾಗಲೇ ಮೈಸೂರಿನ ಕಲ್ಯಾಣವೆಂದು ನಾನು ಹೇಳ ಬಯಸುತ್ತೇನೆ. ಮುಂಬೈ, ಮದರಾಸು ಪ್ರಾಂತಗಳು ಔದ್ಯೋಗಿಕ ಪ್ರಪಂಚದಲ್ಲಿ ಮೈಸೂರಿಗಿಂತ ಕಡಿಮೆಯಿಲ್ಲ. ಉದ್ಯೋಗ, ಕಲೆ, ವಿಜ್ಞಾನದ ಜಗತ್ತಿನಲ್ಲಿ, ಮುಂಬೈ ಜನತೆ, ಮೈಸೂರಿಗಿಂತ ಬಹಳ ಮುಂದೆ ಹೋಗಿದ್ದಾರೆಂಬುದನ್ನು ಮೈಸೂರು

ತಿಳಿದಿರಬೇಕಾದ ಸಂಗತಿ. ಮೈಸೂರಿಗನಿಗಿಂತ ಮುಂಬೈ ಪ್ರಾಂತದ ನಿವಾಸಿಯ ಜೀವನ ಮಟ್ಟ ಬಹಳ ಮೇಲ್ಮಟ್ಟದ್ದಾಗಿದೆ. ಸಾಲದ್ದಕ್ಕೆ ಮೈಸೂರು ಆಹಾರದ ದೃಷ್ಟಿಯಿಂದ ಕೊರತೆಯ ಪ್ರಾಂತ, ಮುಂಬೈ ಕರ್ನಾಟಕ ಉಳಿತಾಯದ ಪ್ರಾಂತ. ನಿಜ ಸಂಗತಿ ಹೀಗಿದ್ದಾಗ ಮೈಸೂರಿನ ಈ ವಿಚಿತ್ರ ನಿಲುಮೆಗೆ ನಾನು ಏನೆಂದು ಹೆಸರಿಡಲಿ?

ಒಟ್ಟಿನಲ್ಲಿ ಬೃಹತ್ ಕರ್ನಾಟಕದ ಕನಸು ನನಸಾದಾಗಲೇ ಕನ್ನಡಿಗನ ಸರ್ವಾಂಗೀಣ ಉನ್ನತಿಗೆ ದಾರಿ ಕಾಣುವದು. ಕನ್ನಡಿಗರಿಗೆ ಕನ್ನಡ ಪ್ರಾಂತ ದೊರಕಿದಂದು ಅವರ ನೆಲ ಚಿನ್ನವಾಗುವುದು: ಅವರ ಬದುಕು ಅಪರಂಜಿಯಾಗುವುದು. ಕರ್ನಾಟಕ ದೊಡ್ಡದಾದರೆ ಹಿಂದುಸ್ಥಾನವೂ ದೊಡ್ಡದಾಗುವದು. ಕರ್ನಾಟಕವು ಸಣ್ಣದಾಗಿಯೇ ಉಳಿದರೆ ಹಿಂದುಸ್ಥಾನವು ದೊಡ್ಡದಾಗಲಾರದು.

ಈ ಮಾತನ್ನು ಕಾಂಗ್ರೆಸ್ ಹಾಯ್ ಕಮಾಂಡು ತಿಳಿದಿರಲಿ. ಕರ್ನಾಟಕದ ರಾಜಕೀಯ ಸೂತ್ರಗಳನ್ನು ಕೈಯಲ್ಲಿರಿಸಿಕೊಂಡು ದಿಲ್ಲಿಯ ಸೆಕ್ರೆಟರಿಯೇಟನಲ್ಲಿ ಕುಳಿತುಕೊಂಡು ಚದುರಂಗದಾಟವಾಡುತ್ತಿರುವ ಶಕುನಿಗಳು ಅರಿತಿರಲಿ.

ಬಿದ್ದ ಕರ್ನಾಟಕ ಕೊನೆಯುವರೆಗೂ ಬಿದ್ದಿರಲಾರದು. ಬಿದ್ದವರು ಏಳುವರು, ತಿಪ್ಪೆ ಉಪ್ಪರಿಗೆಯಾಗುವದು.

---

# ಸಂಪೂರ್ಣ ರಾಮಾಯಣ

ಹೋದವನು ಮತ್ತೆ ತಿರುಗಿ ಬಂದೆ. ಹಾವೇರಿಯಲ್ಲಿ ಕ. ಪ್ರಾಂ. ಕಾಂಗ್ರೆಸ್ಸಿನ ಸಭೆ ಕೂಡುವದಿತ್ತು. ಗದಗಿನ ಸಭೆಯನಂತರ ಇಂತಹ ದೊಡ್ಡ ಸಭೆ ಕೂಡುವದು ಹಾವೇರಿಯಲ್ಲಿಯೆ. ಬೆಳಗಾವಿ, ಧಾರವಾಡ, ವಿಜಾಪುರ, ಮಂಗಳೂರ, ಬಳ್ಳಾರಿ, ಮೈಸೂರುಗಳಿಂದ ಪ್ರತಿನಿಧಿಗಳು ಬರುವವರಿದ್ದರು. ಇದೇ ನಿರ್ಣಾಯಕ ಸಭೆ. ನನಗೆ ಮುಂಬೈಯಲ್ಲಿ ಒಂದು ನಿಮಿಷ ಇರುವದಕ್ಕೂ ಅಸಾಧ್ಯವೆಂದೆನಿಸಿತು. ಕರ್ನಾಟಕಕ್ಕೆ ಓಡಿ ಬಂದೆ.

ಮುಂಬೈಯಿಂದ ಹುಬ್ಬಳ್ಳಿಗೆ ಬಂದರೂ ಅಷ್ಟೇ ಆಯಿತು. ಹುಬ್ಬಳ್ಳಿಯಿಂದ ಹಾವೇರಿಗೆ ಹೊರಡುವದೂ ಅಷ್ಟೇ ಆಯಿತು. ಕಾರಿನಲ್ಲಿ ಮುಕ್ಕಾಲು ಘಂಟೆಯ ಪ್ರವಾಸ ಮೋಟರಿನಿಂದ ಕೆಳಗಿಳಿದು ಮೈಯನ್ನೆಲ್ಲ ನೋಡಿಕೊಂಡರೆ ದಾರಿಯ ಧೂಳವೆಲ್ಲ ಮೈಗೆ ಹತ್ತಿತೋ? ಎನ್ನುವಹಾಗೆ ಅನ್ನಿಸುವಂತಿತ್ತು. ಹಾವೇರಿಯ ಸ್ಥಳೀಯ ಪ್ರಾಥಮಿಕ ಶಾಲೆಯಲ್ಲಿ ಸಭೆ ಕರೆಯಲಾಗಿದ್ದಿತು. ಸಂಜೆಯ ಹೊತ್ತು. ಶಾಲೆಯ ಒಂದು ಭಾಗದಲ್ಲಿ ಶ್ರೀಗಳಾದ ನಿಜಲಿಂಗಪ್ಪ, ಟಿ. ಸುಬ್ರಹ್ಮಣ್ಯಂ ಮಲಗಿಕೊಂಡು ಗೊರಕೆ ಹೊಡೆಯುತ್ತಿದ್ದರು. ನಿದ್ರೆಯಲ್ಲಿ ಕನಸು ಕಾಣುತ್ತಿರುವರೋ ಎನ್ನುವಂತೆ ಅವರ ಮುಖ ತೋರುತ್ತಿದ್ದವು. ಪಾಪ! ಬಹಳ ದಣಿದಿರಬೇಕು! ಹತ್ತಿರದಲ್ಲಿದ್ದ ಸ್ವಯಂ ಸೇವಕರಿಗೆ ಒಂದಿಷ್ಟು ನೀರು ತರಲು ಬಿನ್ನೈಸಿಕೊಂಡು ಮೈಮೇಲಿನ ಧೂಳು ಜಾಡಿಸತೊಡಗಿದೆ. ಅಷ್ಟೊತ್ತಿಗೆ ನೀರು ಬಂದಿತು. ರಾಡಿ ನೀರು! ಈ ಧೂಳು ಬೇಕು, ಆ ರಾಡಿ ನೀರು ಬೇಡ! ಹತ್ತಿರದಲ್ಲೆ ಇರುವ ಹೊಂಡದ ನೀರು ಅದು. ನೀರಿನ ಅರಬು ಹಾವೇರಿಯಲ್ಲಿದೆ. ಈ ನೀರೇ ಪುಣ್ಯ ಗಂಗಾ ಜಲ. ನಾನು ಹುಡುಗರ ಮುಖ ನೋಡಿದೆ. ಏಕೆ ನೋಡುತ್ತೀರಿ? ಕರ್ನಾಟಕಕ್ಕೆ ಪ್ರತ್ಯೇಕ ಪ್ರಾಂತ ಸಿಕ್ಕರೇನೆ ಈ ನೀರಿನ ಸಮಸ್ಯೆ ಪರಿಹಾರವಾಗುವುದು—ಅದು ಹುಡುಗರು ಹೇಳಿದ ಮಾತು. ನಿಜ, ನಿಜ! ಹೊಸರಿತ್ತಿಯಲ್ಲಿಯೂ ಇಂತಹಮಾತು ಕೇಳಿದ ನೆನಪು! ಮುಂಬೈ ಕರ್ನಾಟಕ

ಮುಂಬೈ ಪ್ರಾಂತದ ಹೃದಯ. ಮನಸ್ಸು ಮಾಡಿದರೆ ಈ ದರಿದ್ರ ನೆಲ ಇಂದ್ರನ ನಂದನವನ ಆಗಬಹುದು. ಆದರೆ? ಮುಂಬೈಯಲ್ಲಿ ಕುಳಿತ ನಮ್ಮ ಆಳರಸರಿಗೆ ಕಣ್ಣಿಲ್ಲ, ಕಿವಿಯಿಲ್ಲ, ಹೃದಯವಿಲ್ಲ! ಕನ್ನಡಿಗರ ಆರ್ತ ಸ್ವರವೇ ಅವರಿಗೆ ಕೇಳಿಸಲಾರದು!

ಕ. ಪ್ರಾಂ. ಕಾಗ್ರೆಸ್ಸಿನ ಸಂಘಟಕರಿಗೆ ವೇಳೆಯ ಬೆಲೆಯೇ ಗೊತ್ತಿದ್ದಂತೆ ಕಾಣುವದಿಲ್ಲ. ಅನೇಕ ಸಾರೆ ಈ ಮಾತು ನನ್ನ ಅನುಭವಕ್ಕೆ ಬಂದಿದೆ. ಸಭೆ ನಡೆಯಬೇಕಾದ ವೇಳೆಯೇ ಒಂದು. ಸಭೆ ನಡೆಯುವ ವೇಳೆಯೇ ಇನ್ನೊಂದು. ಗದಗಿನಲ್ಲೂ ಅದೇ ಮಾತು. ಹಾವೇರಿಯಲ್ಲಿಯೂ ಅದೇ ಕತೆ. ಎಂದೂ ಸಮಯಕ್ಕೆ ಸರಿಯಾಗಿ ಅವರು ಕೂಡಿಲ್ಲ. ಕೂಡಿದರೆ ತಲೆ ಸಿಡಿಯುವ ಹಾಗೆ ಮಾತನಾಡುತ್ತಾರೆ.

ಹಾವೇರಿಯ ಪ್ರಾಥಮಿಕ ಶಾಲೆ ಕ. ಪ್ರಾ. ಕಾಂಗ್ರೆಸ್ಸಿನ ಸಭಾಭವನವೆಂದು ಮೇಲೆಯೇ ಹೇಳಿದ್ದೇನೆ. ಶಾಲೆಯ ಗೋಡೆಗಳ ಮೇಲೆ ಪಂಡಿತ ನೆಹರು, ಮಹಾತ್ಮಾ ಗಾಂಧಿ, ಸುಭಾಸ ಬೋಸರ ಭಾವಚಿತ್ರಗಳು ಅಲಂಕೃತವಾಗಿದ್ದವು. ಕರ್ನಾಟಕದ ಧುರೀಣರಿಂದ ನಡೆಯುವ ಏಕೀಕರಣದ ನಾಟಕವನ್ನು ಅವರು ನೋಡುತ್ತಿದ್ದರು. ಸಭೆ ಕೂಡಿತು. ಕರ್ನಾಟಕದ ಹುಡುಗಬುದ್ಧಿಯ ಮುಂದಾಳುಗಳಿಂದ ಸಭೆ ತುಂಬಿದ್ದಿತು. ದಿವಾಕರ ರಾಯರ ಬಳಗ—ಹುಕ್ಕೇರಿಕರ, ಕರಮರಕರ ಅವರು ಎಲ್ಲಿಯೂ ಕಾಣಿಸಲಿಲ್ಲ. ಅವರು ಗದಗಿಗೆ ಬಂದಿದ್ದರು. ಇಲ್ಲಿಗೇಕೆ ಬರಲಿಲ್ಲ ? ನಾನು ಕೇಳಿದ ಪ್ರಶ್ನೆಗೆ ವಿಚಿತ್ರ ಉತ್ತರ ಸಿಕ್ಕಿತು. ಅದು ಎಷ್ಟರ ಮಟ್ಟಿಗೆ ನಿಜವೊ ? ಅಂತೂ ಹೇಳುತ್ತೇನೆ. ಹಾವೇರಿ ಸಣ್ಣ ಪ್ರಮಾಣವಾದರೂ ಅದಕ್ಕೆ ಹೆಸರಿದೆ. ಕನ್ನಡ ನಾಡಿನಲ್ಲಿ ಏಳುವ ಸುಟ್ಟುರೆಗಾಳಿ ಒಮ್ಮೊಮ್ಮೆ ಅಲ್ಲಿಂದಲೇ ಏಳುತ್ತದೆ. ಪ್ರಜಾರಾಜ್ಯದ ದಿನ, ಜನೆವರಿ ೨೬ ರಂದು ಹಾವೇರಿಯ ಪುರೋಗಾಮಿ ಪಕ್ಷದ ಯುವಕರು, ಕೈಯಲ್ಲಿ ಧ್ವಜ ಹಿಡಿದುಕೊಂಡು, ಊರು ಸುತ್ತುತ್ತ ಸರಕಾರದ ವಿರುದ್ಧ ಘೋಷಣೆ ಮಾಡುತ್ತ ಹೊರಟರು. "ಕರ್ನಾಟಕ ಪ್ರಾಂತೀಕರಣಕ್ಕೆ ಅಡ್ಡ ಬಂದ ಸರಕಾರಕ್ಕೆ ಧಿಕ್ಕಾರವಿರಲಿ.!" ಅದು ಇವರ ಘೋಷಣೆ ಮಂತ್ರ! ದಿವಾಕರರ ದಾರಿಯಲ್ಲಿ ಕಲ್ಲು ಮುಳ್ಳು ಸುರುವಬೇಕೆಂದು ಹೂಡಿದ ಯುವಕರ ಹೊಂಚು ಅದು! ಏಕೆಂದರೆ ದಿವಾಕರ ಇನ್ನುಳಿದ ಶಾಸನ ಸಭಾ ಸದಸ್ಯರಂತೆ ರಾಜೀನಾಮೆ ಕೊಡಲಿಲ್ಲವಲ್ಲ?

ಈ ಸಭೆಯಲ್ಲಿ ಎದ್ದು ಕಾಣುವ ಒಂದು ಹಿರಿಯ ಮೂರ್ತಿ— ಅವರ ಹೆಸರು ಹೊಸಮನಿ ಸಿದ್ದಪ್ಪ. ಸಿದ್ದಪ್ಪನವರ ಹೆಸರು ಯಾರು ಕೇಳಿಲ್ಲ? ಹಾವೇರಿಯ ಕೀರ್ತಿ ಅವರು. ಕನ್ನಡದ ಸತ್ವ ಅವರು. ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ಸಿನ ಮಾಜಿ ಅಧ್ಯಕ್ಷರು. ಕೇಂದ್ರದ ಶಾಸನ ಸಭಾಸದ ಸ್ಯರು. ಕರ್ನಾಟಕದ ಪುರೋಗಾಮಿ ಪಕ್ಷದ ಅಧ್ಯಕ್ಷರು.

ಅಧ್ಯಕ್ಷರ ಮಗ್ಗುಲಿಗೇ ಅವರು ಕುಳಿತಿದ್ದರು. ಮೂರ್ತಿ ಕುಳಿತಂತೆ ಅವರು ಕುಳಿತಿದ್ದರು. ಸಭೆ ಮುಗಿಯುವ ವರೆಗೆ ಒಂದು ಮಾತೂ ಆಡಲಿಲ್ಲ. ಆದರೂ ಅವರ ಮೌನಕ್ಕೆ ಅರ್ಥವಿತ್ತು. ಮೂರ್ಖರ ತಲೆಯಲ್ಲಿ ದೇವತ್ವದ ಕಲ್ಪನೆಯನ್ನು ತಂದು ಕೊಡುವಂತಿದ್ದ ಅವರ ಮೌನಕ್ಕೆ ಮಹಾ ಅರ್ಥವೇ ಇದ್ದಿತು. ಇದ್ದಕ್ಕಿದ್ದಂತೆ ಸಭಾ ಭವನದ ಹೊರಗಡೆಯಲ್ಲಿ ಯುವಕರ ಜಯ ಘೋಷಗಳು ಕೇಳಿ ಬಂದವು. ಯಾವತ್ತು ಯುವಕರ ತಂತ್ರ ಒಳಗೆ ನುಗ್ಗಿ ಬರುವಂತೆ ತೋರಿತು. ಹಿರಿಯರು ತಿಳಿವಳಿಕೆ ಹೇಳಿದರು ನೀವು ಒಪ್ಪುವ ಹಾಗೆ ಸಭೆ ತೀರ್ಮಾನು ಮಾಡುತ್ತದೆ. ಯೋಚಿಸಬೇಡಿರಿ. ಎಂಬ ವಚನವನ್ನು ಕೊಟ್ಟಾಗ ಅವರು ಹಿಂದಕ್ಕೆ ಸರಿದರು. ಕರ್ನಾಟಕ ಪ್ರಾಂತೀಕರಣದ ದಾರಿ ಪ್ರಗತಿಪರವಾಗಲಿ; ಅದು ಪುರೋಗಾಮಿ ಪಕ್ಷದ ಆಸೆ.

ಸಭೆ ಪ್ರಾರಂಭವಾಗುವ ಮುನ್ನ ಅಲ್ಲಿ ಸೇರಿದ ಸದಸ್ಯರೊಡನೆ ನಾನು ಮಾತುಕತೆ ಆಡಿದೆ. ಮಂಗಳೂರು ಜಿಲ್ಲೆಯ ಕಾಂಗ್ರೆಸ್ಸಿನ ಉಪಾಧ್ಯಕ್ಷ ಶ್ರೀ ಡಾ. ವಿ. ಪಿ. ಮಲ್ಯ ಮತ್ತು ಕಾರ್ಯದರ್ಶಿ ಕೆ. ಎಸ್. ಶೆಟ್ಟಿ ಹೇಳಿದ ಮಾತು ನನಗೆ ವಿದ್ಯುತ್ ಮುಟ್ಟಿಸಿದಂತಾದವು. "ಮಂಗಳೂರು ಜಿಲ್ಲೆಯವರಿಗೆ ಏಕೀಕರಣದ ಬಗೆಗೆ ಬಹಳ ಆಸ್ಥೆಯಿಲ್ಲ. ಆದರೆ ಸರಿ, ಇಲ್ಲವಾದರೆ ಇಲ್ಲ. ಮೈಸೂರು ಒಲಿದಂತೆ ಮಂಗಳೂರು ಮೈ ಚಾಚುತ್ತದೆ. ಅದಕ್ಕೆ ಕಾರಣ ಮೈಸೂರು ಮಂಗಳೂರಿನ ಕಾರ್ಮಿಕರಿಗೆ ಸ್ಥಾನ ಕೊಟ್ಟಿದೆ." ನಿಜವಾದ ಕಾರಣ ನನಗೆ ಈಗ ತಿಳಿಯಿತು. ಅರ್ಧಮರ್ಧಮನಸ್ಸಿನಿಂದ ಈಜನರು ಹೀಗೇಕೆ ಕಾರ್ಯ ಸಾಗಿಸುತ್ತಿದ್ದಾರೆ ಅನ್ನುವದು ಈಗ ಅರ್ಥವಾಯಿತು. ಮಹಾ ಕರ್ನಾಟಕದ ಉದಯದ ಚಿಂತೆ ಅವರಿಗಿದೆ. ಆದರೆ ಕಾಂಗ್ರೆಸ್ಸನ್ನು ಬಿಟ್ಟು ಹೋರಾಟದ ದಾರಿಯನ್ನು ಹಿಡಿಯಬೇಕೆಂದು ಅವರು ಬಯಸುವದಿಲ್ಲ. "ಮೆಲ್ಲಗೆ ಸಾಗಿರಿ. ಮೈಸೂರಿಗರ ಮನವೊಲಿಸಿರಿ. ಹಾಯ್ಕಮಾಂಡಿನ ಅನುರಾಗ ಪಡೆಯಿರಿ" ಇದು ಅವರ ಮಾತಿನ ಗುಟ್ಟಾಗಿದ್ದಿತು.

ವಿಶೇಷ ಆಮಂತ್ರಣದ ಮೇರೆಗೆ ಮೈಸೂರಿನ ಕಾಂಗ್ರೆಸ್ಸು ಮುಂದಾಳು ಶ್ರೀ. ಟಿ. ಸುಬ್ರಹ್ಮಣ್ಯಂ ಬಂದಿದ್ದರು. ಮೈಸೂರಿನ ಒಂಬತ್ತು ಜಿಲ್ಲೆಗಳಲ್ಲಿ ನಾಲ್ಕು ಮೈಸೂರಿನ ಲೀನೀಕರಣಕ್ಕೆ ಒಪ್ಪುವವು. ಮೂರು ಒಪ್ಪುವದಿಲ್ಲ. ಇನ್ನುಳಿದ ಭಾಗದಲ್ಲಿ ಅರ್ಧ ಹಾಗೆ ಅರ್ಧ ಹೀಗೆ. ಭಾವನಾವಶರಾಗದಿರೋಣ. ವಾಸ್ತವಿಕ ದೃಷ್ಟಿಯಿಂದ ವಿಷಯವನ್ನು ಪರಿಶೀಲಿಸೋಣ. ಮೈಸೂರು ಲೀನೀಕರಣವಾಗುವ ಮುನ್ನ ಮೈಸೂರಿಗರಿಗೆ ಶಿಕ್ಷಣ ಕೊಡಬೇಕು. ಅದು ಎಲ್ಲರಿಗೂ ಕ್ಷೇಮವೆಂದು ಅವರು ತಿಳಿಯುವಂತಾಗಬೇಕು. ಸುಬ್ರಹ್ಮಣ್ಯಂ ಸಭಿಕರಿಗೆ ಹೀಗೆ ಹೇಳಿದರು. ಮೈಸೂರಿನಲ್ಲಿ ಪ್ರಚಾರಬೇಕು. ಒಕ್ಕೂಟ ಕರ್ನಾಟಕದಲ್ಲಿ ಮೈಸೂರು ಸೇರುವದಕ್ಕೆ ಪ್ರಚಾರವೇ ಪ್ರಬಲವಾದ ಸಾಧನ; ಸುಬ್ರಹ್ಮಣ್ಯಂ ಬಹಳ ಜೋರಿನಿಂದ ಹೇಳಿದರು.

ಬಳ್ಳಾರಿಯ ಜನ ಬಹಳ ಅಭಿಮಾನಿಗಳಂತೆ ನನಗೆ ಕಂಡರು. ಅವರ ಛಲವೇ ಛಲ. ಈಗ, ಇಲ್ಲಿಯೇ ಕರ್ನಾಟಕ ಏಕೀಕರಣ ಆದರೇ ಸರಿ; ಎಂದು ಅವರ ಖಂಡ ತುಂಡ ಅಭಿಪ್ರಾಯ. ಅದಕ್ಕಾಗಿ ಬರುವದೆಲ್ಲ ಬರಲಿ, ನಾವು ನೋಡಿಕೊಳ್ಳುತ್ತೇವೆ ಎಂದು ಅವರ ಮತ. ಅವರ ಉತ್ಸಾಹ, ಮೀರಿದ ತಾಳ್ಮೆ ಇವುಗಳ ಅರ್ಥ ನನಗೆ ಆಗುತ್ತಿದ್ದಿತು. ಏಕೆಂದರೆ ಬಳ್ಳಾರಿಯ ಮೇಲೆ ಆಂಧ್ರ ದೇಶದ ಹೋಳ ಕಣ್ಣಿಟ್ಟಿದೆ. ತುಂಗಭದ್ರಾ ಯೋಜನೆ ಬಳ್ಳಾರಿಯ ಫಲವತ್ತಾದ ಜಿಲ್ಲೆಯನ್ನು ನುಂಗಬೇಕೆಂದು ತೋಳ ಜಪ್ಪಿಸಿದೆ. ಅಚ್ಚಗನ್ನಡದ ಈ ಪ್ರದೇಶವನ್ನು ಆಂಧ್ರದೇಶಕ್ಕೆ ಸೇರಿಸಬೇಕೆಂದು ತೆಲುಗರು ಮಾಡಿದ ನಿರ್ಧಾರವನ್ನು ಬಹಿರಂಗವಾಗಿ ಆಹ್ವಾನಿಸಿದ ಭಟರು ಅವರು. ಉಕ್ಕುತ್ತಿರುವ ಅಭಿಮಾನದಿಂದ ಅವರು ಹೇಳಿದರು. "ಕ. ಪ್ರಾಂ. ಕಾಂಗ್ರೆಸ್ಸು ಬಹಳ ಮಾತನಾಡಿದೆ. ವಿಚಾರಿಸಿದರೆ, ಚರ್ಚಿಸಿದರೆ, ಗೊತ್ತುವಳಿ ಪಾಸು ಮಾಡಿದರೆ ಎಲ್ಲ ಹೊಳೆಯಲ್ಲಿ ಹುಣಸೆ ಹಣ್ಣು ತೊಳೆದಂತೆ ಆಗಿದೆ. ಕಾಲ ಈಗ ಬಂದಿದೆ. ಅಂಜಿಕೆ ಬಿಸಾಡಬೇಕು. ಕಾರ್ಯೋನ್ಮುಖರಾಗಬೇಕು." ಉದ್ವಿಗ್ನಪೂರ್ಣವಾದ ಅವರ ಮಾತು ಇತಿಹಾಸದ ಪುಟಗಳಂತೆ ತೋರುತ್ತಿದ್ದವು!

ಬೆಳಗಾವಿಯ ಸದಸ್ಯರು ಕಾಂಗ್ರೆಸ್ಸನ್ನು ತ್ಯಜಿಸುವ ಮಾರ್ಗವೊಂದನ್ನು ಬಿಟ್ಟು, ಬೇರಿನ್ನಾವ ಹೋರಾಟದ ದಾರಿಯನ್ನೂ ತಾವು ಒಪ್ಪುತ್ತೇ

ವೆಂದು ಹೇಳಿದರು. ಇದನ್ನು ಮೊದಲೇ ಬೆಳಗಾವಿಯು ಸದಸ್ಯರು ಕಾಂಗ್ರೆಸ್ಸಿನಲ್ಲಿ ತಮಗಿರುವ ಅಚಲ ವಿಶ್ವಾಸವನ್ನು ವ್ಯಕ್ತಪಡಿಸುವ ಗೊತ್ತುವಳಿಯನ್ನು ಅಂಗೀಕರಿಸಿದ್ದರು. ಇಲ್ಲಿಯವರೆಗೆ ಬಂದದ್ದೇ ಸಾಕು. ಮುಂದಿನ ದಾರಿ ಬೇಡವೆಂಬ ಅಭಿಪ್ರಾಯ ಅವರದಾಗಿದ್ದಿತು. ಧಾರವಾಡ ಮತ್ತು ವಿಜಾಪುರದವರು ಎಲ್ಲದಕ್ಕೂ ಸಿದ್ಧರಾಗಿದ್ದರು. ಸತ್ಯಾಗ್ರಹವಾದರೆ, ಸತ್ಯಾಗ್ರಹ. ಅಸಹಕಾರವಾದರೆ, ಅಸಹಕಾರ. ಅಂತೂ ಕರ್ನಾಟಕ ಏಕೀಕರಣದ ಕನಸು ನನಸಾಗಬೇಕು.

ಈ ಗುಂಪಿನಲ್ಲಿ ಎದ್ದು ಕಂಡವರು ಒಬ್ಬರೇ ಒಬ್ಬರು, ಅವರು ಹುಬ್ಬಳ್ಳಿಯ ಸರದಾರ ವೀರನಗೌಡರು. ವೀರನಗೌಡರ ರಾಜಕೀಯ ತತ್ವ ಪ್ರಣಾಲಿಯೇ ಚಿತ್ರವಿಚಿತ್ರವಾದುದು. ಅವರು ಎದ್ದು ನಿಂತು ತುತ್ತೂರಿ ಊದುತ್ತಿದ್ದರು. "ಹಳ್ಳಿಗಳಿಗೆ ಹೋಗೋಣ ನಡೆಯಿರಿ. ರಚನಾತ್ಮಕ ಕಾರ್ಯ ಕ್ರಮವನ್ನು ಕೈಕೊಳ್ಳೋಣ, ಅದರಿಂದ ದೇಶಕ್ಕೆ ಹಿತವಾದೀತು." ಈ ಧಾಟಿಯಲ್ಲಿ ಹುಬ್ಬಳ್ಳಿಯ ಸರದಾರರು ರಾಗ ಹಿಡಿದಿದ್ದರು. ಆದರೆ ರಣವಾದ್ಯದಲ್ಲಿ ಸನಾದಿಯ ರಾಗ ಯಾರು ಕೇಳುತ್ತಾರೆ? ಆದರೂ ಅವರು ಊದಿಯೇ ಊದುತ್ತಿದ್ದರು. ಕರ್ನಾಟಕದ ಮುಖಂಡರೆಲ್ಲರೂ "ದರಿದ್ರ ನಾರಾಯಣ" ರಾಗಬೇಕೆಂದೂ, ನಿಸ್ವಾರ್ಥ ಕಾರ್ಯಕರ್ತರಾಗಿಯೇ ಇದ್ದುಕೊಂಡು, ರಾಜಕೀಯ ರಂಗದಲ್ಲಿ ಗೌರವಾಧಿಕಾರಗಳನ್ನು ಪ್ರಸ್ಥಾಪಿಸಬೇಕೆಂದೂ ಅವರು ಹೇಳುತ್ತಲಿದ್ದರು. ಕರ್ನಾಟಕದ ನಾಯಕರು ಹಳ್ಳಿಗಳಿಗೆ ತಿರುಗಲಿ; ಆದರಿಂದ ಕೇಂದ್ರದ ಪ್ರಭೃತಿಗಳ ಹೃದಯ ಪರಿವರ್ತನೆಯಾಗುವದೆಂದು ಸರದಾರರು ನನಗೆ ಹೇಳಿದರು. ಪಾಪ! ಬಡ ಮನುಷ್ಯ! ವಯಸ್ಸು ಆಗಿದೆ. ವಯಸ್ಸಿಗೆ ತಕ್ಕಂತೆ ತಲೆಯ ವಿಚಾರಗಳೂ ಕಲ್ಲಾಬಿಲ್ಲಿಯಾಗುತ್ತಿವೆ!

ಮಂತ್ರಿ ಮ. ಪ. ಪಾಟೀಲರು ಉಪಮಂತ್ರಿಗಳಾದ ಕಂಠಿ, ಪಾಟೀಲ, ಜತ್ತಿಯವರು ಕಾಂಗ್ರೆಸ್ಸನ್ನು ತ್ಯಜಿಸುವಲ್ಲಿ ಪುರುಷಾರ್ಥ ಏನೂ ಇಲ್ಲವೆಂದೂ, ರಾಜಕೀಯ ಅರಾಜಕತೆಯ ನಿರ್ಮಾಣದಿಂದ ಕಾರ್ಯ ಸಾಧ್ಯವಾಗದೆಂದೂ ಹೇಳಿದರು. ಕಾಂಗ್ರೆಸ್ಸಿನಲ್ಲಿ ಉಳಿಯಬೇಕು. ಘಟನಾತ್ಮಕ ಹೋರಾಟ ನಡಿಸಬೇಕು. ಅದೊಂದೇ ಈಗ ಉಳಿದಿರುವ ದಾರಿ ಎಂದು ಅಂದರು.

ಅವರು ಹೀಗೆನ್ನುತ್ತಿದ್ದಾಗ ಸಭೆಯಲ್ಲಿ ಅಲ್ಲಲ್ಲಿ ಒಂದೆರಡು ಕಿಡಿನುಡಿಗಳು ಏಳದೇ ಇರಲಿಲ್ಲ. ಅಧಿಕಾರದ ಕುದುರೆಯ ಮೇಲೆ ತಡಿ ಹಾಕಿ ಕುಳಿತು ಕೊಂಡಿದ್ದಾರೆ ಇವರು. ಅಧಿಕಾರ ತ್ಯಜಿಸಲು ಇಷ್ಟವಿಲ್ಲದ ಇವರಿಗೆ ಕಾಂಗ್ರೆಸ್ಸಿನಲ್ಲಿ ಉಳಿಯುವದೊಂದೆ ಹಾದಿ. ಘಟನಾತ್ಮಕ ಹೋರಾಟವೊಂದೇ ದಾರಿ. ಇಂತಹ ವಿಮರ್ಶೆ ಅಲ್ಲಲ್ಲಿ ಕೇಳ ಬರುತ್ತಿದ್ದವು.

ಉಗ್ರಗಾಮಿಗಳು ಎದ್ದರು. ಕಾರಂತರ ಗುಡುಗು, ತಲ್ಲೂರರ ಸಿಟ್ಟು, ಹಳ್ಳೀಕೇರಿ, ದೊಡ್ಡಮೇಟಿಯವರ ಪ್ರತಿಭಟನೆ ಒಂದರಮೇಲೊಂದು ಬಂದವು. ಒಪ್ಪಂದ ನಮ್ಮ ಕಸಬು ಅಲ್ಲ. ಮಾಡು ಇಲ್ಲವೆ ಮಡಿ! ಅದು ನಮ್ಮ ದಾರಿ. ಇಬ್ಬರು ಮಹಿಳೆಯರು—ಬಳ್ಳಾರಿ ಸಿದ್ಧಮ್ಮ, ಮೈಲಾರ ಸಿದ್ಧಮ್ಮ ಅವರ ಮಾತು ಅಷ್ಟೇ ಆಹ್ವಾನದ ಮಾತುಗಳಾಗಿದ್ದವು.

ನೇರಾವಾದ ಹೋರಾಟದ ಮಾರ್ಗವೊಂದೆ ಬಾಕಿ; ಅದೆಂತಹ ಸ್ವರೂಪವನ್ನು ತಳೆದರೂ ಸರಿ. ತಾವು ಆರಿಸಿ ಬಂದ ಕಾಂಗ್ರೆಸ್ ಸ್ಥಳಕ್ಕೆ ರಾಜೀನಾಮೆ ಕೊಟ್ಟು ಹೊರಬೀಳುವದಕ್ಕೂ ಅವರು ಸನ್ನದ್ಧರಾಗಿದ್ದರು. ಇವರ ಈ ಉಗ್ರಗಾಮಿಗಳ ಇದಿರಿನಲ್ಲಿ ಮೈಸೂರು, ಬೆಳಗಾವಿ, ಕಾರವಾರ, ಕೊಡಗಿನ ಸದಸ್ಯರ ವಿರೋಧೀ ಪಕ್ಷವೊಂದು. ಉಗ್ರಗಾಮಿಗಳ ಅಭಿಪ್ರಾಯವನ್ನು ಅವರು ಒಪ್ಪಲಾರರು. "ಉಗ್ರ ಗಾಮಿ ಗಳ" "ವಾಸ್ತವ ವಾದಿಗಳ" ಪರಸ್ಪರ ಅಭಿಪ್ರಾಯಗಳನ್ನು ಅಕ್ಕಪಕ್ಕದಲ್ಲಿ ಇಟ್ಟು ನೋಡಿದಾಗ ಇಬ್ಬರ ನಡುವೆಯೂ ಇರುವ ಅಂತರ ಭೂವ್ಯೋಮದಷ್ಟು! ಸಭೆಯಲ್ಲಿ ಒಂದು ಅಭಿಪ್ರಾಯ ಬಹುಮತವನ್ನು ಪಡೆಯುವಂತೆ ತೋರಿತು. ಕಾಂಗ್ರೆಸ್ಸಿನಲ್ಲಿ ಉಳಿಯಬೇಕು. ಘಟನಾತ್ಮಕ ಹೋರಾಟವನ್ನು ಸಾಗಿಸಬೇಕು. ಎನ್ನುವವರ ಮತ ಅದು.

ಮೂಲ ಗೊತ್ತುವಳಿಯನ್ನು ಬರೆದುದರ ಶ್ರೇಯಸ್ಸು ಕಾರಂತರಿಗೆ ಹೋಗಬೇಕು. ತಮ್ಮ ಕಿಸೆಯಲ್ಲಿ ಗೊತ್ತುವಳಿಯ ಪಾಠವನ್ನು ಇರಿಸಿಕೊಂಡು ರಾತ್ರಿ ಬಹಳ ಹೊತ್ತಿಗೆ ಬಂದರು. ಅವರ ಆಗಮನದಿಂದ ಉಗ್ರಗಾಮಿಗಳ ಮುಖದ ಮೇಲೆ ಬಣ್ಣ ಬಂದಿತು. ಕಾರಂತರು ಬಂದಾಗ ನಿರ್ಜೀವವಾಗಿದ್ದ ವಾತಾವರಣಕ್ಕೆ ಚೇತನ ಬಂದಂತಾಯಿತು. ಸಭಿಕರು ಗುಜುಗುಜು ಮಾತನಾಡತೊಡಗಿದರು. ಈಗ ಕಾರಂತ ಏನು ಮಾಡ

ಬಹುದು? ಏಕೀಕರಣಕ್ಕಾಗಿ ಕಂಕಣಕಟ್ಟಿ ಹೋರಾಡಿದ ಸೇನಾನಿ ಕಾರಂತ; ಕರ್ನಾಟಕದಲ್ಲಿ ಅವರಂತೆ ಅಭಿಮಾನ ಧನರಾಗಿ ಬಾಳು ನಡಿಸುತ್ತಿರುವವರು ಕಡಿಮೆ. ಜನತೆಗೆ ಅವರಲ್ಲಿರುವ ಪ್ರೇಮ ವಿಶ್ವಾಸಗಳೂ ಅತ್ಯಧಿಕ. ಮಾತು ಆಡಿದರೆ ವಿರೋಧಿಯ ಎದೆ ಒಡೆಯಬೇಕು. ಯಾರಾದರೂ ಎದುರು ನುಡಿದರೆ ಕಪ್ಪುರ ಉರಿದಂತೆ ಅವರು ಉರಿಯುತ್ತಾರೆ. ವ್ಯಕ್ತಿತ್ವವೂ ಅಂತಹದೆ; ಗಟ್ಟಿಗರು. ದೃಢಾಭಿಮಾನಿಗಳು. ರಾಜಕೀಯ ರಂಗದಲ್ಲಿಯ ಇದಿರಾಳಿಗಳನ್ನು ಮಾತಿನ ತರ್ಕದಿಂದ ಗೆಲ್ಲಬಲ್ಲ ಶಕ್ತಿ ಅವರಿಗಿದ್ದಂತೆ ಇನ್ನಾರಿಗೂ ಇಲ್ಲ.

ಹೋರಾಟದ ಭೂಮಿಗಿಳಿಯುವ ಹುಂಜದಂತೆ ಅವರು ಕಂಡರು; ಎದ್ದು ನಿಂತರು. ಕಣ್ಣು ತೆರೆದು ಸಭಿಕರ ಕಡೆಗೆ ನೋಡಿದರು. ಗಂಟಲು ಸರಿಪಡಿಸಿಕೊಂಡರು. ಗೆಲ್ಲುವೆನೆಂಬ ಬಿಂಕದಿಂದ ಒಂದೆರಡು ನಿಮಿಷ ಏನೂ ಮಾತನಾಡದೆ ಹಾಗೆಯೆ ಎದ್ದು ನಿಂತರು. ಅಷ್ಟೊತ್ತಿಗೆ ಅಧ್ಯಕ್ಷರು ಅವರನ್ನು ತಡೆದು, ಕುಳಿತುಕೊಳ್ಳಲು ಆಜ್ಞಾಪಿಸಿದರು. ಕಾರಂತರು ಕುಳಿತೇ ಬಿಟ್ಟರು. ಆದರೆ ಮರುದಿನ ಅವರು ಗೊತ್ತುವಳಿಯನ್ನು ಮಂಡಿಸುತ್ತಿದ್ದಾಗ ಸಭಿಕರಂತೆ ಅಧ್ಯಕ್ಷರೂ ಕಾರಂತ ಮಾತನಾಡುವದನ್ನು ಕೇಳಬೇಕೆಂದು ಬಯಸಿದರು.

ನನ್ನಂತೆಯೇ ಇನ್ನೂ ಅನೇಕರು ಕಾರಂತರು ನೇರವಾದ ಹೋರಾಟದ ಮಾರ್ಗವನ್ನೇ ಸೂಚಿಸಬಹುದೆಂದು ನಂಬಿದ್ದರು. ಕಾರಂತರ ದರ್ಪದ ರಾಜಕೀಯ ಜೀವನವನ್ನು ಅರಿತವರು ಅವರ ಭಾಷಣಗಳ ಸಿಡಿಲು, ಮಿಂಚುಗಳನ್ನು ಕಂಡವರು 'ಎಲ್ಲರೂ ಸಭೆಯ ಮೇಲೆ ಕಾರಂತರು ಆ್ಯಟಂ ಬಾಂಬು ಹಾಕಬಹುದೆಂದು ಹೆದರಿದ್ದರು.

ಆದರೆ ನಡೆದ ಸಂಗತಿ ವಿಚಿತ್ರವೇ. ಶ್ರೀಗಳಾದ ಕಾರಂತ ಸುಬ್ರಹ್ಮಣ್ಯಂ, ಜೀನರಾಜ ಹೆಗಡೆ, ಡಾ. ಮುಲ್ಯ ಮುಂತಾದವರು ಮೂಲ ಗೊತ್ತುವಳಿಯ ಮೇಲೆ ಬಹಳ ಚರ್ಚೆ ಮಾಡಿದರು. ಇಡಿಯ ರಾತ್ರಿಯ ಕಾಲವೆಲ್ಲ ಚರ್ಚೆಯಲ್ಲಿಯೇ ಕರಗಿ ಹೋಯಿತು. ನಿಶೆ ಕಳೆದು, ಬೆಳಕು ಮೂಡಿ ಬಂದಾಗ, ಮೂಲ ಗೊತ್ತುವಳಿಯ ಹೃದಯದ ಮೇಲೆಯೇ ಶಸ್ತ್ರಕ್ರಿಯೆ ಆಗಿ ಹೋಗಿದ್ದಿತು. ವೈದ್ಯರ ಕೈಯಲ್ಲಿ ಸಿಕ್ಕು, ಗೊತ್ತುವಳಿ ಹೊಸ

ರೂಪುಗೊಂಡು ಬಂದಾಗ, ಅದನ್ನು ಗುರುತು ಹಿಡಿಯುವದಕ್ಕೂ ಅಸಾಧ್ಯವಾಗಿದ್ದಿತು. ಎಲ್ಲ ರಾಜಕೀಯ ಪಕ್ಷ ಪಂಗಡದವರಿಗೂ ಅದು ಸಮ್ಮತವಾಗಬೇಕು. ಅಂತಹ ಗೊತ್ತುವಳಿಯನ್ನು ಕಾರಂತರು ಸಭೆಯ ಮುಂದಿರಿಸಿದರು. ಮೂರು ಜನ ಮಾತ್ರ ವಿರೋಧಿಸಿದರು. ಉಳಿದವರೆಲ್ಲರೂ ಒಪ್ಪಿಕೊಂಡರು.

ಬಹಳ ಹುಷಾರಿಯಿಂದ ಗೊತ್ತುವಳಿ ಬರೆದಿದ್ದರು. ಅದರಿಂದ ಉಗ್ರಗಾಮಿಗಳಿಗೂ ಸಂತೋಷವಾಗಬೇಕು. ವಾಸ್ತವವಾದಿಗಳಿಗೂ ಆನಂದವಾಗಬೇಕು. ಅದೇ ಕಾಲಕ್ಕೆ ಹೈಕಮಾಂಡಿಗೂ ಆಹ್ವಾನವೂ, ಎಚ್ಚರಿಕೆಯೂ ಹೋಗಬೇಕು. ಹಿಂದಿನ ನಿಲುಮೆಯನ್ನು ಈ ಗೊತ್ತುವಳಿ ಇನ್ನೂ ಬಲಪಡಿಸಿತು. ಪ್ರಾಂತೀಕರಣದ ದಾರಿಯಲ್ಲಿ ಆಗಬೇಕಾದ ಹೊಸ ಮಾರ್ಪಾಟುಗಳನ್ನು ಸೂಚಿಸಿತು. "ಹೊಸ ಚುನಾವಣೆಗಳು ನಡೆಯುವ ಮುನ್ನವೆ ಕರ್ನಾಟಕದ ಪ್ರಾಂತೀಕರಣವನ್ನು ಕಾಂಗ್ರೆಸ್ಸು ಸಾಧಿಸಿ ಕೊಡದಿದ್ದರೆ ಕರ್ನಾಟಕದ ಜನತೆ ಕಾಂಗ್ರೆಸ್ಸಿನಲ್ಲಿ ವಿಶ್ವಾಸವಿಡುವ ಭರವಸೆಯಿಲ್ಲ."

ಗೊತ್ತುವಳಿಯಲ್ಲಿ ಕರ್ನಾಟಕದ ಶಾಸನ ಸಭಾಸದಸ್ಯರ ರಾಜೀನಾಮೆಯ ಮಾತೇ ಇರಲಿಲ್ಲ.

ಇದು ಒಂದು ರೀತಿಯ ಹಿನ್ನಡೆಯೆ, ಆದರೆ ಯಶಸ್ವಿ ಹಿನ್ನಡೆ. ಈ ದುರ್ದೈವೀ ಗೊತ್ತುವಳಿಯನ್ನು ರಾಜಕಾರಣಿಗಳು ಮುತ್ಸದ್ದಿತನದ ಗೊತ್ತುವಳಿಯೆಂದು ಕರೆದು ಹಿಗ್ಗಿದರು. ಆದರೆ ಸಾಮಾನ್ಯ ಕನ್ನಡಿಗನಿಗೆ ಆದ ನೋವು ಹೇಳಬಾರದಷ್ಟು. ಅವನಿಗೆ ದಾರಿಯೇ ತೋರಲೊಲ್ಲದು. ರಾಜೀನಾಮೆಯ ಮಾತು ಅವನ ಮನಸ್ಸನ್ನು ಹಿಗ್ಗಿಸಿದ್ದಿತು. ಕುತೂಹಲವನ್ನೂ ಕೆರಳಿಸಿದ್ದಿತು. ಈಗ ಏನಾಯಿತು? ಮಂಜು ಕರಗಿದಂತೆ ಆಗಿ ಹೋಯಿತು. ಈ ಹಿನ್ನಡೆಯ ಮಂತ್ರ, ಜಪ, ತಪಾದಿಗಳು ಜನ ಸಾಮಾನ್ಯರಿಗೆ ಅರ್ಥವಾಗದೆ ಉಳಿದವು. ಗೊತ್ತುವಳಿ 'ಸಮಯ ಸಾಧನೆ'ಗೆ ಉಪಯುಕ್ತವಾದದ್ದು ಎಂದು ಕಾರಂತ ಅಂದರು. ಅಷ್ಟರಲ್ಲಿ ಜನತೆಯನ್ನು ಹುರಿದುಂಬಿಸಬೇಕು. ನಾಡಿನಲ್ಲಿ ಜಾಗೃತಿಯನ್ನುಂಟು ಮಾಡಬೇಕು. ಏಕೀಕರಣದ ಜಯ ಘೋಷವನ್ನು ಒಕ್ಕಟ್ಟಿನಿಂದ ನಾಡಿಗೆ ನಾಡೇ ಕೂಗುವಂತೆ ಮಾಡಬೇಕೆಂದು ಕಾರಂತರು ಹೇಳಿದರು. ಈ ಗೊತ್ತುವಳಿಯಿಂದ ಕಾರಂತರಿಗೆ ಸಮಾಧಾನವಿರಲಿಲ್ಲ.

ಆದರೂ ಸದ್ಯದ ಪರಿಸ್ಥಿತಿಯಲ್ಲಿ 'ಇದ್ದುದರಲ್ಲಿ ಅದೇ ಒಳ್ಳೆಯದು' ಎಂದು ಅಂದರು. ಸಭೆಯಲ್ಲಿನ ಭಾಷಣಗಳು ನಾಡನ್ನು ನಿರಾಶೆಗೊಳಿಸುವವು. ನಾಯಕರು ಉತ್ತರ ಕುಮಾರರಾಗಿ ತೋರುವರು. ಅದರಲ್ಲೇನು ಸಂದೇಹ?

ತಲ್ಲೂರ ರಾಯನಗೌಡರು ಒಬ್ಬ ಅಪ್ರತಿಮ ಸೇನಾನಿ. ಹಾವೇರಿಯ ಸಭೆಯಲ್ಲಿ ಜೀವ ಸಂಚಾರವಾಗಿದ್ದರೆ ಅದು ಅವರಿಂದ ಮಾತ್ರ. ಗವರ್ನರರ ಕಡೆಗೆ ರಾಜೀನಾಮೆ ಈಗಲೇ ಹೊರಡಲಿ! ಎಂದು ಗೌಡರು ಅಂದಾಗ ಪ್ರಾಥಮಿಕ ಶಾಲೆಯ ಗೋಡೆಗಳು ಕಾಂತಿಹೀನವಾಗಿದ್ದ ಶಾಸನ ಸಭಾ ಸದಸ್ಯರ ಮುಖಗಳನ್ನೇ ನೋಡಿದವು. ಅವರ ಮಾತಿಗೆ ಬೆಂಬಲಿಗರಿರಲಿಲ್ಲ. ಬಿ. ಎನ್. ದಾತಾರರ ದಾರಿ ಸ್ವತಂತ್ರವಾದ ದಾರಿ. ತಮ್ಮ ಅಭಿಪ್ರಾಯ ಕಾರಂತರ ಗೊತ್ತುವಳಿಯಲ್ಲಿದೆ, ಅಷ್ಟೇ ಸಮಾಧಾನ; ಎಂದು ಅಂದು ಕುಳಿತವರು ಮತ್ತೆ ಏಳಲಿಲ್ಲ. ಸರದಾರ ವೀರನಗೌಡರ ಪರಿಸ್ಥಿತಿಯಂತೂ ವಿಚಿತ್ರವೆ ಆಗಿದ್ದಿತು. ಅವರ ಅಭಿಪ್ರಾಯ ತೋಯಿಸಿಕೊಂಡ ಗುಬ್ಬಿಯಂತೆ ಆಗಿದ್ದಿತು. ಯಾರೂ ಕೇಳುವವರೇ ಇರಲಿಲ್ಲ.

ಮುಂದಾಳುಗಳು ಮಾತನಾಡುವುದನ್ನು ಮುಗಿಸಿದಾಗ ಮಹಿಳೆಯರು ಎದ್ದುನಿಂತು ಮಾತನಾಡಿದರು. ಹಾವೇರಿ ಸಭೆಯಲ್ಲಿ ದೊರಿದ ಸೋಜಿಗ ಮೈಲಾರ ಸಿದ್ದಮ್ಮ. ಮಹದೇವಪ್ಪನ ಹೆಸರನ್ನು ನೀವು ಕೇಳಿಲ್ಲ? ಹೊಸರಿತ್ತಿ ನಾಡಿನಲ್ಲಿ ದುಷ್ಟ ಶಕ್ತಿಗಳು ಒಡ್ಡಿದ ಜಾಲದಲ್ಲಿ ಬಿದ್ದು ಗುಂಡಿನೇಟನ್ನು ನುಂಗಿ, ಪ್ರಾಣಬಿಟ್ಟ ಹುತಾತ್ಮಾ ಮಹದೇವಪ್ಪನ ಮಡದಿ ಮೈಲಾರ ಸಿದ್ದಮ್ಮ. ಸಿದ್ಧಮ್ಮ ಹೇಳಿದರು. 'ನೀವು ಹೇಡಿಗಳಂತೆ ಹಿನ್ನಡೆಯಿಡುತ್ತಿದ್ದೀರಿ.' ಎಂದು ಸಿದ್ಧಮ್ಮಅಂದಾಗ ಒಬ್ಬರಿಗೊಬ್ಬರು ಮುಖ ನೋಡುತ್ತ, "ಇಂಥ ಬೈಗಳು ನಮಗೆ ಬರಬೇಕೆ? ನಾವು ಅದಕ್ಕೆ ಪಾತ್ರರೇ?" ಎಂದು ಅಂದುಕೊಂಡರು.

ಆ ಮೇಲೆ ದೊಡ್ಡಮೇಟಿ ಮಾತನಾಡಿದರು. ಅವರು ಏನು ಮಾತನಾಡಿದರೋ ಏನೊ! ಸಭಿಕರಿಗೆ ತಿಳಿಯಲಿಲ್ಲ.

ಹಳ್ಳೀಕೇರಿಯವರು "ಹಣಕೊಡಿರಿ. ಹಣಕೊಡಿರಿ. ನಾನು ಕೆಲಸ ಪೂರೈಸುತ್ತೇನೆ" ಎಂದು ಅಂದರು. 'ನವಯುಗ'ದ ನೆಸ್ವಿಯವರು ತಾಳ ಹಾಕಿದರು.

" ನನ್ನನ್ನು ಬಿಟ್ಟುಬಿಡಿರಿ. ನನಗೆ ಸಾಕಾಗಿದೆ. ಅಧ್ಯಕ್ಷಪದವಿಗೆ ರಾಜೀನಾಮೆ ಕೊಡುತ್ತೇನೆ " ಎಂದು ನಿಜಲಿಂಗಪ್ಪನವರು ರಾಗ ಎತ್ತಿದರು. ಅಲ್ಲಿಗೆ 'ಸಂಪೂರ್ಣ ರಾಮಾಯಣ' ಮುಕ್ತಾಯವಾಯಿತು!

ಆ ರಾಗ, ಆ ತಾಳ, ಆ ತಂತಿ, ಅ ಕೇಸರ ಬಾಸರ—ನನ್ನಂತೆಯೆ ಹಾವೇರಿಯ ಗೋಡೆಗಳು ಮರೆಯಲಾರವು!

ನನಗೆ ಖಚಿತವಾಗಿ ಅನ್ನಿಸುತ್ತದೆ. ಕನ್ನಡದ ನೆಲದ ಮೇಲೆ ಬೆವರಿನ ಮಳೆ, ಕಣ್ಣೀರಿನ ಕೋಡಿ ಹರಿಯುವ ವರೆಗೂ ಕರ್ನಾಟಕಕ್ಕೆ ಏಕೀಕರಣ ವಿಲ್ಲ; ಮಹೋದಯವಿಲ್ಲ!

---

ಸರದಾರರು ತ್ರಾವಣಕೋರ, ಕೋಚೀನ ವಿಲಯನ ಸಂಬಂಧವಾಗಿ ಎರ್ನಾಕುಲಮ್‌ಕ್ಕೆ ಬಂದಿದ್ದಾರೆ. ಎರ್ನಾಕುಲಮ್‌ದ ಮಾತುಕತೆ ಮುಗಿಸಿ ಕೊಂಡು 'ದಿಲ್ಲಿ' ಯ ನೌಕೆಯಲ್ಲಿ ಕುಳಿತುಕೊಂಡು ಕಾರವಾರಕ್ಕೆ ೧೯೫೦ ಮೇ ತಿಂಗಳಿನ ೧೭ ನೆಯ ತಾರೀಖಿನಂದು ಬರುವವರಿದ್ದಾರೆ. ಕನ್ನಡ ನಾಡಿನ ಕಾಂಗ್ರೆಸ್ಸಿಗರಿಗೆ ಸರದಾರರಿಂದ ಕರೆ ಬಂದಿದೆ. ದರ್ಶನಕ್ಕೆ ಬರ ಬೇಕು. ಕನ್ನಡ ನಾಡಿನ ಮುಂದಾಳುಗಳಿಗೆ ಒಳ್ಳೆಯ ಸಂದರ್ಭ!

ಇಂಥ ಸಂದರ್ಭವನ್ನು ನಮ್ಮ ನಾಯಕರು ಎಂದಾದರೂ ಕಳೆದು ಕೊಳ್ಳುತ್ತಾರೆಯೆ? ಅವರು ಆಶಾಪೂರ್ಣ ದೃಷ್ಟಿಯಿಂದ ಕಾರವಾರದ ಕಡಲ ತೀರದ ಕಡೆಗೆ ನೋಡಿದರು. ದರ್ಶನಕ್ಕೆ ಒಪ್ಪಿದರು. ಒಪ್ಪುವ ಮುನ್ನ ಒಂದೆರಡು ಪ್ರಹಸನಗಳನ್ನೂ ನಡಿಸಿದರು. ಉಗ್ರಗಾಮಿಗಳದೊಂದು ಪ್ರಹ ಸನ, ಮಂದಗಾಮಿಗಳದೊಂದು ಪ್ರಹಸನ, ಅಧ್ಯಕ್ಷರದೊಂದು ಪ್ರಹಸನ. ಹೀಗೆ ಮೂರು ಪ್ರಹಸನಗಳೂ ಹುಬ್ಬಳ್ಳಿಯಲ್ಲಿಯೇ ನಡೆದವು. ಪಾಪ! ಮುಗ್ಧ ಮನಸ್ಸಿನ ಕನ್ನಡ ನಾಡಿನ ಜನತೆಗೆ ಈ ಪ್ರಹಸನದ ಅರ್ಥವೇ ಆಗಲಿಲ್ಲ. ಉಗ್ರಗಾಮಿಗಳಿಗೆ ಕನ್ನಡ ಸಮಾಜಕ್ಕೆ ಮುಖ ತೋರಿಸುವ ಮನಸ್ಸಿಲ್ಲ. ಬೆಟ್ಟದಂತಹ ಮಾತನಾಡಿ ಈಗ ಕಾರವಾರಕ್ಕೆ ಮುಂದರಿದರೆ ಕನ್ನಡ ನಾಡು ಮುಖಕ್ಕೆ ಮಸಿ ಬಳಿಯದೆ ಇರಲಾರದೆಂದು ಅವರು ಹಿಂಜ ರದರು. ಮಂದಗಾಮಿಗಳಿಗೆ ಯಾರ ಅಂಜಿಕೆಯೇನು? ಅವರು ಯಾತಕ್ಕೂ ಸಿದ್ಧರಿದ್ದಾರೆ. ಸೋಲು ಗೆಲವುಗಳು ಪುಣ್ಯವಶವೆಂದು ಹೇಳಿದ ಶ್ರೀ ಹರಿಯ ಉಕ್ತಿಯೇ ಅವರಿಗೆ ರಕ್ಷಾ ಕವಚ. ಈ ಇಬ್ಬಣಗಳ ಮಧ್ಯೆ ಅಡಕೊತ್ತಿ ನಲ್ಲಿಯ ಅಡಿಕೆಯಂತೆ ಸಿಕ್ಕ ಶ್ರೀ ನಿಜಲಿಂಗಪ್ಪನವರಿಗೆ ಏನು ಮಾಡಲೂ ತಿಳಿಯಲೊಲ್ಲದು. ಅಖಿಲ ಭಾರತ ವರ್ಕಿಂಗ ಕಮಿಟಿಯಲ್ಲಿ ಏಕೀಕರಣದ ಪ್ರಶ್ನೆ ಬಂದಾಗ ಕನ್ನಡ ನಾಡಿನ ಹಿತವನ್ನು ಬೆನ್ನಿಗೆ ಕಟ್ಟಿಕೊಂಡು ಒಬ್ಬಂಟಿ ಗರಾಗಿಯೇ ಹೋರಾಡಿದರು. ಅವರ ನಾಡ ಪ್ರೇಮ, ನುಡಿಯ ನಿಷ್ಠೆ ವರ್ಕಿಂಗ ಕಮೀಟಿಗೆ ಒಪ್ಪಿತವಾಗಲಿಲ್ಲ. ಮಾತ್ರವಲ್ಲ, ಅವರು ಸರದಾರರ ಆಹ್ವಾನಕ್ಕೆ ಗುರಿಯಾಗುವ ಹೊತ್ತು ಬಂದಿತು. ಅಂದು ಅಲ್ಲಿಯ ಆಳುವ ವರ್ಗದವರ ದಬ್ಬಾಳಿಕೆಗೆ ಈಡಾಗಿ ಬಂದ ನಿಜಲಿಂಗಪ್ಪ ಇಂದು ಸರದಾರ ಪಟೇಲರನ್ನು ಕಾಣುವದಾದರೂ ಹೇಗೆ? ಕರ್ಮ ಧರ್ಮ ಸಂಯೋಗವೇ

ಎನ್ನಬೇಕು. ಸದ್ಯಕ್ಕೆ ನಿಜಲಿಂಗಪ್ಪನವರಿಗೆ ಆರೋಗ್ಯ ಸರಿಯಾಗಿಲ್ಲ. ಆದುದರಿಂದ ಅವರು ಕಾರವಾರಕ್ಕೆ ಹೋಗುವಂತಿಲ್ಲ. ಈ ಅನಾರೋಗ್ಯ ದಿಂದಾಗಿ ತಮ್ಮನ್ನು ಅಧ್ಯಕ್ಷ ಪದವಿಯಿಂದ ನಿವೃತ್ತ ಮಾಡಬೇಕೆಂದು ಅವರ ಬಿನ್ನಹ! ಅಂತೂ ಒಳ್ಳೆಯ ಯೋಜನೆ!

ಕಾರವಾರದ ಹರಕೆಯ ಕ್ಷೇತ್ರಯಾತ್ರೆಯನ್ನು ಕೈಕೊಳ್ಳುವ ಮುನ್ನ ಕ. ಪ್ರಾಂ. ಕಾಂಗ್ರೆಸ್ಸಿನ ಸದಸ್ಯರು ಸುದೀರ್ಘಯೋಚನೆ ಮಾಡಿದರು. ಎಲ್ಲರೂ ಹೋಗುವುದೇ ಬೇಡ. ಮೂರು ಜನ ಹೋದರೆ ಸಾಕು ಎಂದು ಕೆಲವರ ಮತ. ಮೂರು ಜನರೇ ಏಕೆ? ಹೋಗ ಬಯಸುವವರೆಲ್ಲರೂ ಹೋಗಲಿ. ಸರದಾರರಿಗೆ ಕರ್ನಾಟಕದ ಒಮ್ಮತದ ಅಭಿಪ್ರಾಯವನ್ನು ಹೋದವರು ಸ್ಪಷ್ಟವಾಗಿ ಹೇಳಲಿ; ಎಂದು ಮತ್ತೆ ಕೆಲವರ ಮತ. ಸರದಾ ರರಿಗೆ ಏನನ್ನು ಹೇಳುವದು? ಕಾಂಗ್ರೆಸ್ಸಿನಲ್ಲಿ ಕರ್ನಾಟಕಕ್ಕಿರುವ ಏಕಮೇವ ನಿಷ್ಠೆಯನ್ನು ವ್ಯಕ್ತಗೊಳಿಸುವದೆ? ಇಲ್ಲವೆ ನಿಷ್ಠೆ ಸಡಿಲಿ, ಕರ್ನಾಟಕದಲ್ಲಿ ಕಾಂಗ್ರೆಸ್ಸಿನ ಸಮಾಧಿ ಸಿದ್ಧವಾಗುತ್ತಿದೆಯೆಂದು ತಿಳಿಸುವದೇ? ಹಾಯ್ ಕಮಾಂಡಿನಲ್ಲಿ, ಒಲವು, ವರಗಳನ್ನು ಬೇಡಬೇಕೆ? ಅಥವಾ ಅದರ ದಬ್ಬಾಳಿಕೆ, ಆಕ್ರಮಣ ಶೀಲ ಮನೋವೃತ್ತಿಯನ್ನು ಖಂಡಿಸಿ ಹೇಳಬೇಕೆ?

ಕ. ಪ್ರಾಂ. ಕಾಂಗ್ರೆಸ್ಸಿನಲ್ಲಿ ನಿಚ್ಚಳವಾಗಿ ಇಬ್ಬಣಗಳಂತೂ ಎದ್ದು ತೋರಿಯೇ ತೋರುತ್ತವೆ. ಒಂದು ಬಣದವರಂತೂ ಈಗ ಕಾರವಾರಕ್ಕೆ ಹೋಗುವದೇ ಇಲ್ಲ. ಮಂದಗಾಮಿಗಳು ಹೊರಡುವದಕ್ಕೆ ನಿಶ್ಚಯಿಸಿದರು. ಪ್ರಸಂಗಬಂದರೆ ಅನ್ನಿಸಿದುದನ್ನು,ಅನ್ನಿಸಿದಂತೆ ಹೇಳಿಯೇ ಬಿಡೋಣ; ಎಂದು ನಿರ್ಧಾರ ಮಾಡಿಕೊಂಡು, ಉಗ್ರವಾದಿಗಳ ಬೆಂಬಲಿಗರೂ ಹೊರಡುವದಕ್ಕೆ ಸನ್ನದ್ಧರಾದರು. ನೋಡಬೇಕು, ಯಾರು ಮುಂದಾಗಿ ಏನೆಂದು ಹೇಳು ತ್ತಾರೊ!

ಚರ್ಚೆಯ ಮೇಲೆ ಚರ್ಚೆಯೇನೊ ನಡೆಯಿತು. ಉಗ್ರಗಾಮಿಗಳು ಛಲದ ಸೇಡಿನಿಂದ ನಡುಗಿದರಾದರೂ ಮುಂದಕ್ಕೆ ಬೀಳಲಿಲ್ಲ. ಮಂದ ಗಾಮಿಗಳು ಪಾಲಿಗೆ ಬಂದದ್ದೇ ಪಂಚಾಮೃತವೆಂದೆನ್ನುತ್ತ ಕಾರವಾರದ ಕಡೆಗೆ ಮುಖತಿರುವಿದರು.

ಐದಲ್ಲ, ಐವತ್ತು ಕಾಂಗ್ರೆಸ್ ಸದಸ್ಯರು ಸರದಾರರ ಸಂದರ್ಶನವನ್ನು ಪಡೆಯುವದಕ್ಕೆ ಒಬ್ಬರಿಗಿಂತ ಒಬ್ಬರು ಮುಂದಾದರು. ಈ ಮುನ್ನ ಅವರೆಲ್ಲ ತಳೆದಿದ್ದ ಆಶೋತ್ತರಗಳನ್ನು ಬದಿಗಿರಿಸಿ, ಈಗೊಂದು ಹೊಸ ಹಂಬಲವನ್ನು ಅವರು ಕಂಡರು. ಸರದಾರರ ಸಮ್ಮುಖದಲ್ಲಿ ನಿಂತು, ಭಯ ಭಕ್ತಿಯಿಂದ ವಂದನೆಗಳನ್ನರ್ಪಿಸುವುದೆ ತಮ್ಮ ಪಾಲಿನ ಪುಣ್ಯವೆಂದು ಬಗೆದರೋ ಏನೊ!

೧೯೪೦ನೆಯ ಇಸವಿಯ ಮೇ ತಿಂಗಳಿನ ೧೭ನೆಯ ತಾರೀಖು! ಕಾರವಾರದ ಕಡಲ ತೀರದ ಒಂದು ಮೈಲಿನಿಂದಾಚೆಗೆ 'ದಿಲ್ಲಿ'ಯ ನೌಕೆ ನೀರ ಮೇಲೆ ನಿಂತಿದ್ದಿತು. ಮೇಲೆ ಬಿತ್ತರದ ಬಾನಂಗಣದ ನಡುನೆತ್ತಿಯ ಮೇಲೆ ನೇಸರು ಬಂದಿದ್ದನು. ನೆಲ, ನೀರು, ಬಾನು ಎಲ್ಲಾ ಕಾವೇರಿದ್ದವು; ಮಳಲ ತೀರದ ಮೇಲೆ ನಿಂತುಕೊಂಡು ಈಚೆಗೆ ಒಂದಿಷ್ಟು ನೋಟ ಬೀಸಿ ನೋಡಿದರೆ—

ಅಗೋ ಅಲ್ಲಿ ಮೃಗ ಜಲ ಚಿನ್ನಾಟವಾಡುತ್ತಿದೆ! ಮೃಗಜಲವನ್ನು ಬೆಂಬತ್ತಿ ಬಂದ ಚಿಗರೆಗಂಗಳ ಚೆಲುವಿ ಬೆದರಿ ನಿಂತಿದ್ದಾಳೆ! ಕಂಗಳಲ್ಲಿ ಭಯ ವಿದೆ. ಹೃದಯದಲ್ಲಿ ನಡುಕವಿದೆ. ಆಸೆ ಗುಳ್ಳೆ ಒಡೆಯಿತೆಂಬ ಅಂಜಿಕೆ ಚಣ ಚಣಕ್ಕೂ ಅವಳ ಮೊಗದಲ್ಲಿ ಮೂಡುತ್ತಿದೆ, ಮಾಯವಾಗುತ್ತಿದೆ, ಮತ್ತೆ ಮೂಡುತ್ತಿದೆ! ಕನ್ನಡದ ದೇವಿ ಯಾರದೋ ಬರವನ್ನು, ಯಾರದೋ ನೆರವನ್ನು ನಿರೀಕ್ಷಿಸಿ, ನಿಂತಿದ್ದಾಳೆ!

ಬಂದರು. ನಂಬುಗೆಯ ಕೊರಲಿಗೆ ಉರುಲು-ಹಗ್ಗ ಹಿಡಿದುಕೊಂಡು, ಕರ್ನಾಟಕದ ಐವತ್ತು ಕಾಂಗ್ರೆಸ್ ಸದಸ್ಯರು ಬಂದರೋ ಬಂದರು. ಬರುತ್ತಿರುವವರರ ಗುಂಪಿನಲ್ಲಿ ಮೊಹರೆಯವರು ಎದ್ದು ಕಾಣುತ್ತಲಿದ್ದರು. ತಾವು ಹೂಡಿದ ಗುರಿ ಸಾಧನೆಯ ದಾರಿಯಲ್ಲಿರುವದನ್ನು ಕಂಡು ಅವರು ಹಸನ್ಮುಖಿಗಳಾಗಿದ್ದರು. ಮೊಹರೆಯವರ ಹಿಂದೆ ಮಾಗಡಿ, ಮಾಗಡಿಯವರ ಬೆಂಗಾವಲಲ್ಲಿ ಸರದಾರ ವೀರನಗೌಡರು. ಬಿ. ಎನ್. ದಾತಾರರು ಈ ಬಳಗದ ನೇತಾರರು. ಸದಸ್ಯರೆಲ್ಲರು ಡೋಣಿಯನ್ನೇರಿ 'ದಿಲ್ಲಿ'ಯ ನೌಕೆಯನ್ನೇರಿ ಬಂದಾಗ ಕಾರವಾರದ ಕಡಲ ತೀರದ ತೆರೆಗಳು ನೀರ ಮೇಲೆ ನಡೆವ ಮಾತು ಕತೆಯನ್ನು ಕೇಳುವುದಕ್ಕೆ ಉತ್ಸುಕತೆಯನ್ನು ತಳೆದಿದ್ದವು. ಭೂಮಿ ನಿಶ್ಚಲವಾಗಿ ನಿಂತು ನೋಡುತ್ತಿತ್ತು. ಚಿನ್ನಾಟವಾಡುವ ಮೃಗಜಲ ಜಣಹೊತ್ತು

ಚಂಚಲತೆಯನ್ನು ತ್ಯಜಿಸಿತ್ತು. ಮುನ್ನೀರು ಮೌನದ ಮಹಾ ಮುದ್ರೆಯನ್ನು ತಳೆದ ಯೋಗೀಶ್ವರನಂತೆ ಸ್ಥಿತ ಪ್ರಜ್ಞತೆಯನ್ನು ತಳೆದಿತ್ತು.

ಅಂತಹ ಗಂಭೀರ ವಾತಾವರಣ ಸುತ್ತಲೂ ನೆಲಸಿ ಬಂದ ಚಾವದಲ್ಲಿ:- ನೀವು ಬಂದದ್ದು ಸಂತೋಷ ಎಂದೆನ್ನುತ್ತ ಸರದಾರರು ಕರ್ನಾಟಕ ಕಾಂಗ್ರೆಸ್ ಸದಸ್ಯರನ್ನು ಬರಮಾಡಿಕೊಂಡರು. "ಸಂತೋಷ"ಕ್ಕೆ ಪ್ರತಿ ಸಂತೋಷವನ್ನು ಹೇಳುತ್ತ ಕಾಂಗ್ರೆಸ್ ಸದಸ್ಯರು ತಾವು ಹೊತ್ತು ತಂದಿದ್ದ ಕೊರಳ ಹಾರಗಳನ್ನು ಸರದಾರರಿಗೆ ಅರ್ಪಿಸಿದರು. ಹಾರ ಸಮರ್ಪಣೆಯ ನಂತರ ಸರದಾರರು ಎಲ್ಲರ ಕಡೆಗೂ ಕಣ್ಣು ಹೊರಳಿಸಿ ನೋಡಿದರು; ಯಾರಿಗೂ ತುಟಿ ಬಿಚ್ಚುವ ಧೈರ್ಯವೇ ಇರಲಿಲ್ಲ.

"ಕಾಂಗ್ರೆಸ್ ಸಂಘಟನೆಯನ್ನು ಬಲಗೊಳಿಸಿ ಭಾರತ ಸರಕಾರ ಮತ್ತು ಜನತೆಯಲ್ಲಿ ಹೆಚ್ಚೆಚ್ಚಿನ ಸುಸಂಬದ್ಧತೆಯನ್ನುಂಟು ಮಾಡಿ, ಹೊಸದಾಗಿ ಸಂಪಾದಿಸಿದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು 'ನೀವು' ಹೆಣಗಾಡಬೇಕು; ಎಂದು ಸರದಾರ ಪಟೇಲರು ಸದಸ್ಯರಿಗೆ ಉಪದೇಶದ ಮಾತುಗಳನ್ನು ಹೇಳುತ್ತಿರುವಂದು ನಮ್ಮವರು ತಾವು ಹೇಳಬೇಕೆಂದಿದ್ದ ಮಾತನ್ನು ಮರೆತು; "ಪ್ರಯತ್ನಿಸುತ್ತೇವೆ" ಎಂಬ ಉತ್ತರವನ್ನು ಕೊಡುತ್ತ ಸರದಾರರು ಮುಂದಿರಿಸಿದ ಮಾತಿನಕಡೆಗೆ ಮತ್ತೆ ಲಕ್ಷ್ಯವನ್ನು ಹೊರಳಿಸಿದರು.

"ಕರ್ನಾಟಕಕ್ಕೆ ಬಹಳ ಸಮಸ್ಯೆಗಳಿವೆ....."

"ಹೌದು, ಹೌದು ಸರದಾರಜೀ "

"ಆದರೆ, ಸುತ್ತಲಿನ ಪರಿಸ್ಥಿತಿ ಕಠಿನವಿದೆ. ದೇಶ ಇಬ್ಭಾಗವಾಯಿತು. ಆರ್ಥಿಕ ಸ್ಥಿತಿ ಕಠಿನವಿದೆ. ದೇಶಕ್ಕೆ ಆರ್ಥಿಕ ಸ್ವಾತಂತ್ರ್ಯ ಬರದ ವಿನಹ ನಿಮ್ಮ ಸಮಸ್ಯೆಗಳತ್ತ ಲಕ್ಷ್ಯ ಹಾಕುವದು ಕಠಿನವಿದೆ. ಅಲ್ಲಿಯ ವರೆಗೆ ಸುಮ್ಮನಿರಿ" ಸರದಾರರು ಅಸತ್ಯಪೂರ್ಣವಾದ ಮಾತನ್ನು ಹೇಳುತ್ತಿದ್ದಾಗ ವ್ಯಕ್ತಿಗೆ ಅಂಜಿ, ಅಧಿಕಾರಕ್ಕೆ ಅಂಜಿ, ಕರ್ನಾಟಕದ ಕಾಂಗ್ರೆಸ್ ಸದಸ್ಯರು ಸತ್ಯವನ್ನು ವಂಚಿಸಿದರು. ದೇಶಕ್ಕೆ ಬಂದ ಆರ್ಥಿಕ ವಿಪತ್ತನ್ನು ಹೋಗಲಾಡಿಸುವದಕ್ಕಾಗಿಯೇ ಭಾಷಾನುಗುಣ ಪ್ರಾಂತ ರಚನೆಯ ನಿರ್ಮಾಣ ಕಾರ್ಯ ಅಗತ್ಯವೆಂಬ ಮಾತನ್ನು ನಮ್ಮವರು ಹೇಳುವದಕ್ಕೆ ಹಿಂಜರಿದರು. ಯಾವ

ದೊಂದು ನಿರ್ದಿಷ್ಟವಾದ ತತ್ವದ ತಳಹದಿಯ ಮೇಲೆ ರಚಿತವಾಗದ ಇಂದಿನ ಪ್ರಾಂತಗಳು ದೇಶದ ಕಲ್ಯಾಣವನ್ನು ಸಾಧಿಸುವದಕ್ಕೆ ಅಸಮರ್ಥವಾಗಿರುವದರಿಂದಲೇ ಕನ್ನಡ ನಾಡಿನ ಏಕೀಕರಣದ ಪ್ರಶ್ನೆಯನ್ನು ಎತ್ತಿ ಹಿಡಿಯುವದಕ್ಕೆ ತಾವು ಒತ್ತಾಯಪಡಿಸಲು ಬಂದಿದ್ದೇವೆಂಬುದನ್ನು ಹೇಳುವದಕ್ಕೆ ಹೆದರಿದರು.

ಕನ್ನಡ ನಾಡಿನ ಏಕೀಕರಣದ ಮಾತನ್ನು ಎತ್ತಿ ಹೇಳುವುದು ಎತ್ತೋ ಉಳಿಯಿತು. ಸರದಾರರು "ಮೈಸೂರಿಗೆ ಪ್ರತ್ಯೇಕ ಕಾಂಗ್ರೆಸ್ಸಿನ ಸ್ಥಾನಮಾನವನ್ನು ಕೊಟ್ಟದ್ದನ್ನು ಕಂಡು ನೀವು ಅಸಂತುಷ್ಟಿಗಳಾಗಕೂಡದು. ಅವರು ಹಟ ಹಿಡಿದರು. ಏನು ಮಾಡುವದಿದೆ? ಅವರಿಗೂ ಸಮಾಧಾನ ಪಡಿಸಬೇಕಲ್ಲವೆ?" ಎಂದು ಹೇಳಿದಾಗ ಹಿಂದೆ ಕನ್ನಡ ನಾಡಿನ ಸಾರ್ವಜನಿಕ ಸಭೆಯಲ್ಲಿ ಹುಲಿಯಂತೆ ಗುಡುಗಿದ ಕ. ಪ್ರಾಂ. ಕಾಂಗ್ರೆಸ್ಸಿನ ಸದಸ್ಯರು ಕುರಿಗಳಂತೆ ಮಿಕಿ ಮಿಕಿ ನೋಡುತ್ತಿದ್ದರು.

ಮುಗಿದೇ ಹೋಯಿತು. ನೀರ ಮೇಲಿನ ಮಾತುಕತೆ ಅಲ್ಲಿಗೇ ಮುಗಿಯಿತು. ಹಾರ ತುರಾಯಿ ಅರ್ಪಿಸಿ, ಒಬ್ಬರ ಹಿಂದೊಬ್ಬರು ಕೈ ಜೋಡಿಸಿ ನಿಂತುಕೊಂಡು, ಸರದಾರರ ನಾಲ್ಕು ಹಿತೋಪದೇಶದ ಮಾತುಗಳನ್ನು, ತಲೆಯಲ್ಲಾಡಿಸುತ್ತ ಕೇಳುವ ಹೊತ್ತಿಗೆ, ಹತ್ತು ಹದಿನೈದು ನಿಮಿಷಗಳುರುಳಿ ಹೋದವು.

ಸರದಾರರಿಗೆ ಅಷ್ಟೊತ್ತಿಗೆ ವೇಳೆಯಾಗಿದ್ದಿತು. ಅವರು ಗಡಿಯಾರದ ಕಡೆಗೊಮ್ಮೆ ನೋಡಿ ಸದಸ್ಯರತ್ತ ನೋಟ ಬೀರಿದರು.

"ಕರ್ನಾಟಕದಲ್ಲಿ ಕಾಂಗ್ರೆಸ್ಸಿನ ಸ್ಥಾನ ಮಾನಗಳನ್ನು ನಾವು ಕಾಯುತ್ತೇವೆ" ಎಂದು ನಮ್ಮವರು ಸರದಾರರಿಗೆ ಆಶ್ವಾಸನವನ್ನಿತ್ತರು.

ದಿವಾಕರರ ಬಳಗಕ್ಕೆ ಆನಂದವೆ ಆನಂದ. ಸತ್ಯ, ಸೇವೆ, ತ್ಯಾಗ' ಅಹಿಂಸೆಗಳ ಮಾತೇ ಮಾತೆಂದು ವೀರನಗೌಡರಿಗೆ, ಮುಂದಗಾಮಿಗಳಿಗೆ ಸುಖ. ಇನ್ನುಳಿದವರಿಗೆ 'ಬಂದ ದಾರಿಗೆ ಸುಂಕವಿಲ್ಲ!'

ನಿಂತ ತೆರೆಗಳು ಆಟವಾಡತೊಡಗಿದವು. ಮೃಗಜಲಕ್ಕೆ ಮತ್ತೆ ಚಿನ್ನಾಟ. ಅಗೊ, ಚಿಗರಿಗಂಗಳ ಚೆಲುವಿ ಚೆದರಿ ನಿಂತಾಳ ನೋಡೋ!

ಬೆದರಿ ನಿಂತಾಳ ನೋಡೊ! ಗಿಣಿ ಹಕ್ಕಿ ಒದರ‍್ಯಾವೊ, ಗಿಡದೆಲಿ ಉದುರ‍್ಯಾವೊ ಆಗದವರ ಹೊಟ್ಟೆ ಉರದಾವೊ!! ಗೆಣೆಯಾ ಉರದಾವೊ........ಕಾರವಾರದ ಮಳಲ ತೀರದ ಮೇಲೆ ಕವಿ ಕೋಕಿಲವೊಂದು ಕನ್ನಡ ನಾಡಿಗೆ ಬಂದ ದುರ್ಗತಿಯನ್ನು ನೆನೆನೆನೆದು ಕಣ್ಣೀರು ಹಾಕುತ್ತಲಿತ್ತು!

'ದಿಲ್ಲಿ'ಯ ನೌಕೆಗೇನು ದುಃಖವಾಗಬೇಕಿದೆ? ಲಂಗರು ಊರಿದ್ದ ಹಡಗು, ಕರ್ನಾಟಕದ ದುರ್ದೈವೀ ಕಥನವನ್ನು ಹಿಂದೆ ಬಿಟ್ಟು, ಚಲಿಸ ತೊಡಗಿತು. ಗೊತ್ತು ಗುರಿಯಿಲ್ಲದೆಯೆ ಅಲುಗಾಡುತ್ತಿರುವ ಕರ್ನಾಟಕದ ಭವಿಷ್ಯತ್ತಿನಂತೆ ಅಲಗಾಡುತ್ತ ಕನ್ನಡ ನಾಡಿನ ಹೃದಯದ ಮೇಲೆ ಬರೆಯೆಳೆವ 'ಉಕ್ಕಿನ ಮನುಷ್ಯ'ನನ್ನು ಹೊತ್ತುಕೊಂಡು ದಿಲ್ಲಿಯ ನೌಕೆ ಮುಂದರಿಯ ತೊಡಗಿತು!

ಕ. ಪ್ರಾ. ಕಾಂಗ್ರೆಸ್ಸಿನ "ಭೀಷ್ಮ ಪ್ರತಿಜ್ಞೆ" ಕಾರವಾರದ ಮಳಲ ತೀರದ ಮೇಲೆ ಶರ ಪಂಜರದ ಮೇಲೆ, ಮಲಗಿತು. ಏಕೀಕರಣದ ನಾಯಕರ 'ಸುಯೋಧನನ ಛಲ" ನೌಕೆಯ ಮೇಲೆ ಮಕುಟ ಭಂಗಕ್ಕೀಡಾಯಿತು.

ಇಲ್ಲಿಗೆ ನಮ್ಮ ನಾಯಕರ 'ಕಾಶೀಯಾತ್ರೆ"ಯ ಕತೆ ಮುಗಿಯಿತು. ಕ್ಷಮಿಸಬೇಕು, ಕರ್ನಾಟಕದ ಏಕೀಕರಣದ ಅತಿರಥ, ಮಹಾರಥಿಗಳ ದುರಂತ ಕಥನ ಇಲ್ಲಿಗೇ ಮುಕ್ತಾಯವಾಯಿತು.

ಕರ್ನಾಟಕ ಇನ್ನು ಯುವ ಜನಾಂಗವನ್ನು ನಚ್ಚಿ, ಹೊಸ ಬಾಳನ್ನು ಕಟ್ಟಿಕೊಂಡು, ಹೊಸ ಹೋರಾಟಕ್ಕೆ ಇನ್ನು ಸನ್ನದ್ಧವಾಗುವದೊಂದೆ ಬಾಕಿ! ಅಲ್ಲೇ ಅದರ ಗುರಿ, ಅಲ್ಲೇ ಅದರ ಭದ್ರತೆ!

---

# ಐಕ್ಯತೆಯಲ್ಲಿ ಭಿನ್ನತೆಯೆ?

ಭಾಷಾನುಗುಣ ಪ್ರಾಂತ ರಚನೆಯ ನೇರವಾದ ದಾರಿಯಲ್ಲಿ ಅಧಿಕಾರಿ ವರ್ಗದವರು ಕೃತ್ರಿಮವಾದ ಗಿರಿಕಂದರಗಳನ್ನು ರಚಿಸಿ, ಏಕೀಕರಣವನ್ನು ಮುಂದೂಡಿದರು. ಸಹಸ್ರಾರು ವರ್ಷಗಳ ಪರ್ಯಂತ ನಿರ್ಮಲ, ಸಾತ್ವಿಕ ಬದುಕನ್ನು ನಡಿಸಿಕೊಂಡು ಬಂದ, ಕನ್ನಡರ ಇತಿಹಾಸ ಮೊತ್ತ ಮೊದಲ ಬಾರಿ ಧಾರರಂತಹ ಸಣ್ಣ ಮನಸ್ಸಿನವರಿಂದ ದುರ್ದೈವೀ ಟೀಕೆಯನ್ನು ಕೇಳುವಂತಾಯಿತು. ಭಾಷಾನುಗಣ ಪ್ರಾಂತ ರಚನೆಯ ಪ್ರಶ್ನೆ ಬಂದಾಗ ಸೀಮಾ ಸಮಸ್ಯೆಯು ಕಾಳೋರಗನಂತೆ ಹೆಡೆಯೆತ್ತಿ ನಿಂತು, ದೇಶದ ಆಂತರಿಕ ಶಾಂತಿಯನ್ನು ನುಂಗಿ ನೊಣೆಯುವದೆಂಬ ಆರೋಪವನ್ನು ಧಾರರಿಂದಲೂ, ಏಕೀಕರಣದ ವಿರೋಧಿಗಳಿಂದಲೂ ಕೇಳುವಂತಾದುದು ದುರ್ದೈವದ ಸಂಗತಿ. ಮೇರು ಪರ್ವತ ಪ್ರಾಯವಾದ ಕನ್ನಡದ ಬದುಕು, ಎಂದೆಂದಿಗೂ ಅಲ್ಪತೆಯ ಕಡೆಗೆ ಕಣ್ಣೆತ್ತಿ ನೋಡಿಲ್ಲ. ಮಾತ್ರವಲ್ಲ, ಅಭಯ ಬೇಡಬಂದವರಿಗೆ ಆಶ್ರಯವನ್ನಿತ್ತು, ನೆಲಿಸ ಬಯಸಬಂದವರಿಗೆ ತಮ್ಮ ನೆಲದಲ್ಲಿ ಸಮಪಾಲನ್ನಿತ್ತು ಪರಂಪರಾನುಗತವಾಗಿ ಬಂದ ಹಿರಿಯ ಸಂಸ್ಕೃತಿಯನ್ನು ರಕ್ಷಿಸಿಕೊಂಡು ಬಂದವರು ಕನ್ನಡಿಗರು. ಗೌರೀಶಂಕರದೆತ್ತರವನ್ನೂ ಮೀರಿ ನಿಂತ ಅವರ ಔದಾರ್ಯದ ಕಥನವೆಲ್ಲಿ? ತೃಣಸಮವಾದ ರಾಜಕಾರಣಿಯ ಬೂಟಾಟಿಕೆಯ ಮಾತೆಲ್ಲಿ?

ವಿರೋಧಿಗಳು ಹೇಳಿದ ಸೀಮಾ ಸಮಸ್ಯೆಯ ಪ್ರಶ್ನೆಯನ್ನು ಕನ್ನಡಿಗರು ನಿರ್ವಂಚನೆಯಿಂದ ಬಿಡಿಸಬಹುದಾಗಿದ್ದಿತು. ಆದರಬಗೆಗೆ ಇಂತಹ, ಸಂದೇಹ ಸಂಶಯಗಳು ಏಳುವದಕ್ಕೆ ಅವಕಾಶವೇ ಇರಕೂಡದಿದ್ದಿತು. ಉದಾರ ಮತಿಗಳಾದ ಕನ್ನಡ ನಾಡವರು ಯಾವ ಕಾಲಕ್ಕೂ, ಎಂದಿಗೂ, ಯಾರಿಗೂ ಅನ್ಯಾಯ ಮಾಡಿಲ್ಲ. ಉತ್ತರ ದೇಶದಿಂದ ಬಂದ ಭದ್ರಬಾಹು ಮುನಿಗಳನ್ನು ಬರಮಾಡಿಕೊಂಡು ಜೈನ ಧರ್ಮದ ವಿಕಾಸಕ್ಕೆ ಇಂಬು ಮಾಡಿಕೊಟ್ಟವರು, ಚೋಳದೇಶದಿಂದ ಓಡಿ ಬಂದ ರಾಮಾನುಜಾಚಾರ್ಯರನ್ನು

ಸ್ವಾಗತಿಸಿ, ವೈಷ್ಣವ ಮತದ ಪ್ರಾಬಲ್ಯಕ್ಕೆ ಅನುವನಿತ್ತವರು, ಹೆರವರ ಸೊತ್ತನ್ನು ಮಾಲಿನ್ಯವೆಂದು ಬಗೆದು ದೂರವಿಟ್ಟಾರಲ್ಲದೆ, ಕೈಯಿಂದ ಎಂದಿಂಗೂ ಮುಟ್ಟಲಾರರು. ಗಡಿ ನಿರ್ಣಯ ಸಮಿತಿ ಆದೇಶ ಕೊಟ್ಟಿದ್ದರೆ ಅದನ್ನು ನಿಜಕ್ಕೂ ಕನ್ನಡಿಗರು ಒಪ್ಪುತ್ತಿದ್ದರು. ಅವರಪಾಲಿಗೆ ಸಮಸ್ತ ಹಿಂದುಸ್ಥಾನವೇ ಒಂದು ಕುಟುಂಬ. ಪ್ರಾಂತ ಪ್ರಾಂತಗಳು ಒಂದು ಮನೆಯ ಬಳಗವಿದ್ದಂತೆ; ಒಬ್ಬರ ಹಿತ ಇನ್ನೊಬ್ಬರಿಗೆ ಪ್ರಿಯವಾದುದು. ಇನ್ನೊಬ್ಬರ ಕ್ಷೇಮ ಮತ್ತೊಬ್ಬರಿಗೆ ಸ್ವಾಗತಾರ್ಹವಾದುದು. ಕನ್ನಡಿಗರ ಹಿರಿಯ ಮನೋಧರ್ಮವನ್ನರಿಯದೆ ರಾಜಕಾರಣಿಯು ಅಕ್ಷಮ್ಯ ಅಪರಾಧವನ್ನು ಮಾಡಿದನು. ತನ್ನ ಈ ತಪ್ಪಿನಿಂದ ಒಂದು ನುಡಿಗೆ ಮಾತ್ರವಲ್ಲದೆ, ಒಂದು ನಾಡಿಗೆ ಮಾತ್ರವಲ್ಲದೆ, ಕನ್ನಡ ನುಡಿ ಕನ್ನಡ ನಾಡನ್ನೊಳಗೊಂಡ ಭರತ ವರ್ಷಕ್ಕೇ ಅನ್ಯಾಯ ಮಾಡುತ್ತಿರುವೆನೆಂಬುದನ್ನು ಈ ರಾಜಕಾರಣಿಯು ಅರಿಯದೇ ಹೋದನೆಂಬ ಸಂಗತಿ ಯಾರಿಗೂ ಮರುಕವನ್ನುಂಟು ಮಾಡಬಹುದಾಗಿದೆ.

ಮುಂಬಯಿ ಪ್ರಾಂತದ ಧಾರವಾಡ, ವಿಜಾಪುರ, ಬೆಳಗಾವಿ, ಸೊಲ್ಲಾಪುರ ಮತ್ತು ಉತ್ತರ ಕನ್ನಡ ಜಿಲ್ಲೆಗಳು; ಮದರಾಸು ಪ್ರಾಂತದ ಬಳ್ಳಾರಿ, ನೀಲಗಿರಿ, ದಕ್ಷಿಣ ಕನ್ನಡ ಜಿಲ್ಲೆಗಳು; ಮಾತ್ರವಲ್ಲದೆ ಅನಂತಪುರ, ಕರ್ನೂಲು, ಚಿತ್ತೂರು, ಮಲಬಾರ ಜಿಲ್ಲೆಯ ಕೆಲವು ಪ್ರದೇಶ, ಇಡಿಯ ಮೈಸೂರ ಸಂಸ್ಥಾನ; ಕೊಡಗು ಪ್ರಾಂತ; ಗೋವಾಪ್ರಾಂತದ ಕೆಲವು ಭಾಗ ಹೈದರಾಬಾದ ಸಂಸ್ಥಾನದ ಕೊಪ್ಪಳ, ಬೀದರ, ಗುಲಬುರ್ಗಾ, ರಾಯಚೂರು ಜಿಲ್ಲೆಗಳು ಮತ್ತು ವರಂಗಲ್ ಜಿಲ್ಲೆಯ ಕೆಲವು ಭಾಗ—ಇದು ಬೃಹತ್ ಕರ್ನಾಟಕದ ನಕ್ಷೆಯಲ್ಲಿ ಮೂಡಬೇಕಾದ ಕನ್ನಡ ನಾಡಿನ ವಿಸ್ತಾರ. ೯೬ ಸಾವಿರ ಚದುರು ಮೈಲಿಗಳಲ್ಲಿ ಹರಹಿರುವ ವಿಸ್ತೀರ್ಣವಾದ ಕನ್ನಡ ನಾಡಿನ ಈ ಭೂಭಾಗದಲ್ಲಿ ವಾಸಿಸುವ ಜನಸಂಖ್ಯೆ ಎರಡು ಕೋಟಿಗೂ ಮಿಕ್ಕುತ್ತದೆ. ವಿಲಯಿತವಾದ ಸಂಸ್ಥಾನಗಳೂ ಈ ಬೃಹತ್ ಕರ್ನಾಟಕ ಸೀಮಾ ರೇಖೆಯಲ್ಲಿ ಬಂದಿವೆ.

ಕನ್ನಡವೆ ಉಸಿರು, ಕನ್ನಡವೆ ಜೀವ, ಕನ್ನಡವೆ ಬದುಕು ಭಾಗ್ಯವಾಗಿರುವ ಈ ಎರಡು ಕೋಟಿ ಜನತೆಯ ಬಾಳು, ಹಿಂದುಸ್ಥಾನವು ಸ್ವಾತಂತ್ರ್ಯ

ವನ್ನು ಪಡೆಯುವ ಮುನ್ನ ಹತ್ತೊಂಬತ್ತು ಆಡಳಿತದಲ್ಲಿ ಸಿಕ್ಕು, ಒಡೆದ ಕನ್ನಡಿಯಂತೆ, ನೆಲಕ್ಕೆ ಬಿದ್ದ ನಕ್ಷತ್ರದಂತೆ ಆಗಿದ್ದಿತು. ಇಂಗ್ಲೀಷರ ಆಳಿಕೆಯ ಕಾಲದ ಹಿಂದೂ ದೇಶದ ನಕ್ಷೆಯನ್ನು ಕಣ್ಣೆದುರು ಇರಿಸಿಕೊಂಡು, ಕೃಷ್ಣೆ ಕಾವೇರಿಯರು ಮೈದೊಳೆವ ನಾಡಿನ ಕಡೆಗಷ್ಟು ನೋಡಿದರೆ–ಹೃದಯವನ್ನು ಸೀಳಿ, ಹೋಳು, ಹೋಳು ಮಾಡಿ ಒಗೆದಂತೆ–ಕಾಣುವದೇ ಕರ್ನಾಟಕದ ಭೂಮಿ! ಒಂದುಕಡೆ ಮುಂಬಯಿ, ಇನ್ನೊಂದು ಕಡೆ ಮದರಾಸು, ಮತ್ತೊಂದು ಕಡೆ ಕೊಡಗು. ನಡುವೆ ಅಲ್ಲಲ್ಲಿ ತುರಾಯಿ ಹಚ್ಚಿಕೊಂಡು ಜಂಭದ ಕೋಳಿಯಂತೆ ಕೂಗುತ್ತಿರುವ ಸಂಸ್ಥಾನಿಕರು. ಕನ್ನಡದ ನೆಲ ನೀರು ಕಾಣದೆ, ಬಿರ್ರನೆ ಬಿರಿತು ಇಬ್ಭಾಗವಾಗಿ ಹೋದರೂ ಅತ್ತ ಕಡೆ ಕಣ್ಣೆತ್ತಿ ನೋಡುವವರಿಲ್ಲ. ಕನ್ನಡದ ಕೂಸಿನ ಮೇಲೆ, ವರುಷ ವರುಷಕ್ಕೂ, ಬರಗಾಲದ ಮಾರಿ, ದಾಳಿ ದಳ್ಳುರಿಗಳನ್ನೆಸಗಿ, ಕೈಗೆ ಬಂದದ್ದನ್ನೆಲ್ಲ ದೋಚಿಕೊಂಡು ಹೋದರೂ ಪರಿಹಾರ ಸೂಚಿಸುವವರಿಲ್ಲ. ಸರಿಯಾದ ದಾರಿಯಿಲ್ಲದೆ, ದಾರಿಯಿದ್ದಲ್ಲಿ ನೀರಿಲ್ಲದೆ, ನೀರಿದ್ದಲ್ಲಿ ನೆಳಲಿಲ್ಲದೆ, ನೆಳಲಿದ್ದಲ್ಲಿ ಅನ್ನವಿಲ್ಲದೆ– ಒಂದಿದ್ದರೆ ಇನ್ನೊಂದಿಲ್ಲದೆ, ಕರ್ನಾಟಕವು ಕಾಲಕಾಲಕ್ಕೆ ಕಣ್ಣೀರನ್ನೇ ಕೂಳೆಂದು ನಂಬಿ ಬದುಕನ್ನು ಹೊರೆಯುತ್ತಿರುವ ಸಂದರ್ಭದಲ್ಲಿ–ಮುಂಬೈ ರಾಜ್ಯದ ಕಣ್ಣು ಗುಜರಾಥದ ಕಡೆಗೆ, ಮದರಾಸು ರಾಜ್ಯದ ಕಣ್ಣು ಆಂಧ್ರದ ಕಡೆಗೆ, ಮೈಸೂರು ರಾಜ್ಯದ್ದು ಮೈಸೂರಿನ ಕಡೆಗೆ ಕಣ್ಮನಗಳನ್ನು ತಿರುಗಿಸಿ ನಿಶ್ಚಿಂತವಾಗಿ ಕುಳಿತಿದ್ದಲ್ಲಿ ಏನಾಶ್ಚರ್ಯ? ಮಲಮಗಳಿಗೆ ಸಾವು, ನೋವು ಬಂದಡರಿದರೆ ಮಲತಾಯಿಗೆ ನೋವೇನು ಆಗಬೇಕಾಗಿದೆ?

ಬ್ರಿಟಿಶರಾಳಿಕೆಯ ಕಾಲದ ಮಾತು ಹಿಂದಾಗಿ ಹೋಯಿತು. ಶಾಶ್ವತವಾದ ತತ್ವದ ತಳಹದಿಯ ಮೇಲೆ, ಪ್ರಾಂತಗಳನ್ನು ರಚಿಸುವದೇ ಸ್ವತಂತ್ರ ಹಿಂದೂ ದೇಶದ ಪ್ರಥಮ ಕರ್ತವ್ಯವೆಂದು ಅಖಿಲ ಭಾರತ ಕಾಂಗ್ರೆಸ್ಸು ಸಾರಿ ಹೇಳಿದ ಮಾತು, ಎಂದೋ ಕಾರ್ಯರಂಗಕ್ಕಿಳಿಯಬೇಕಾದುದು ಇಂದಿಗೂ ಆಗಲಿಲ್ಲ.

ಪ್ರಾಂತ ನಿರ್ಮಾಣ ಕಾರ್ಯದಲ್ಲಿ ಅಡ್ಡಿ ಆತಂಕಗಳಾಗಬಹುದಾಗಿದ್ದ ಸಂಸ್ಥಾನಗಳೂ ನೀರಗುಳ್ಳೆಯಂತೆ ಒಡೆದು ಹೋದವು. ಹೈದರಾಬಾದಿನಂತಹ ಹಿರಿಯ ಸಂಸ್ಥಾನವೂ ಸರದಾರರ ವಜ್ರಮುಷ್ಟಿಗೆ ಸಿಲುಕಿ ಲೋಕ

ಪ್ರಿಯ ಸರಕಾರವನ್ನು ಸ್ವಾಗತಿಸುವ ಸಂದರ್ಭವೂ ಸನ್ನಿಹಿತವಾಯಿತು. ವೈಸೂರಿನ ರಾಜ ಪ್ರಮುಖರಂತೂ, ಮೊದಲೇ ಜನಾಭಿಪ್ರಾಯಕ್ಕೆ ತಲೆವಾಗಿ ಪ್ರಜಾವರ್ಗಕ್ಕೆ ಅಧಿಕಾರವನ್ನೊಪ್ಪಿಸಿದರು.

ಕನ್ನಡದ ಜನ, ಕನ್ನಡದ ನೆಲ ಎಲ್ಲೆಲ್ಲಿ ಇದೆಯೊ, ಅಲ್ಲಲ್ಲಿ ಸುತ್ತಾಡಿ ಬಂದರೆ, ಏಕಕಂಠದಿಂದ ಜನ ಏಕೀಕರಣಕ್ಕಾಗಿ ಕೂಗುವದು ಕೇಳ ಬರುತ್ತಿದೆ. ಧಾರವಾಡ, ವಿಜಾಪುರ, ಬಳ್ಳಾರಿ ಜಿಲ್ಲೆಗಳು ಸಂಯುಕ್ತ ಕರ್ನಾಟಕದ ನಿರ್ಮಾಣವೇ ತಮ್ಮ ಬದುಕಿನ ಉದ್ಧಾರದ ದಾರಿಯೆಂದು ಏಂದೋ ಸಾರಿ ಹೇಳಿವೆ. ವೈಸೂರನ್ನೊಳಗೊಂಡ ಬೃಹತ್ ಕರ್ನಾಟಕದ ಭವ್ಯ ಸಿದ್ಧತೆಗಾಗಿ ಅವರು ಬಹಳ ಕಾಲದಿಂದ ಶ್ರಮಿಸಿದ್ದಾರೆ, ಶ್ರಮಿಸುತ್ತಲಿದ್ದಾರೆ. ಭಾಷಾನುಗುಣ ಪ್ರಾಂತ ರಚನೆಯನ್ನು ಒಪ್ಪಿಕೊಂಡ ಕಾಂಗ್ರೆಸ್ಸು, ವಚನಕ್ಕೆ ತಿಲಾಂಜಲಿಯನ್ನಿತ್ತುದನ್ನು ಕಂಡ ಅವರು ಹೈಕಮಾಂಡನ್ನು, ಕಾಂಗ್ರೆಸ್ಸನ್ನು ಸಂದೇಹದ ದೃಷ್ಟಿಯಿಂದ ನೋಡುತ್ತಲಿದ್ದಾರೆ. ಅವರು ನೊಂದಿದ್ದಾರೆ, ಮುನಿಸುಗೊಂಡಿದ್ದಾರೆ. ಅವರ ಸೇಡು, ಯಾವಾಗ ಲಾವಾರಸದಂತೆ ಕೊಡವಿಕೊಂಡೆದ್ದು ಭೂಮಿಯನ್ನು ನಡುಗಿಸೀತೆಂಬುದನ್ನು ಹೇಳಲಿಕ್ಕಾಗದು. ಸತ್ಯಕ್ಕಾಗಿ ಮಿಡಿಯುತ್ತಿರುವವರ ಭಾವಾದೇಶವನ್ನು ಯಾರು ಅಲ್ಲಗಳೆದು ನುಡಿದಾರು? ನಡಿದಾರು ?

ಮಂಗಳೂರು, ಎಂದಿಗೂ ಏಕೀಕರಣದ ದಾರಿಯಲ್ಲಿ ಮುನ್ನಡೆದಿದೆ. ಕೊಡಗು ಪ್ರಾಂತ ವೈಸೂರನ್ನು ಹಿಂಬಾಲಿಸುವದು. ಕಾರಂತ, ಜಿನರಾಜ ಹೆಗಡೆಯವರು ಏಕೀಕರಣದ ಅಧ್ವರ್ಯುಗಳಾಗಿ ಅವ್ಯಾಹತವಾದ ಕಾರ್ಯ ನಡಸಿದ್ದನ್ನು ಎಲ್ಲರೂ ಬಲ್ಲರು. ಏಕೀಕರಣ ಪ್ರಚಾರ ಕಾರ್ಯದಲ್ಲಿ ಮಂಗಳೂರು ಮಹತ್ವದ ಸಾಧನ ಸಾಮುಗ್ರಿಗಳನ್ನೊದವಿಸಿದೆ. ಪ್ರಚಾರ ಪುಸ್ತಕಗಳನ್ನು ಪ್ರಕಟಿಸಿ ಜನ ಬೆಂಬಲವನ್ನು ಸಂಪಾದಿಸಿದೆ.

ಬೆಳಗಾವಿ, ಕಾರವಾರ ಜಿಲ್ಲೆಗಳು ವಾದಗ್ರಸ್ತ ಪ್ರದೇಶಗಳೆಂದು ಹೇಳುವ ಮಾತಿನಲ್ಲಿ ತಥ್ಯವಿಲ್ಲೆಂಬ ಸಂಗತಿಯನ್ನು ಮನೆನಾಡಿನ ತತ್ವವೇ ಸಾರೀ ಹೇಳುವುದು. ಕಾರವಾರ, ಸುಪಾ, ಹಳ್ಳಿಯಾಳಗಳು ಶುದ್ಧ ಕನ್ನಡದ ಪ್ರದೇಶಗಳು. ಬೆಳಗಾವಿ ಜಿಲ್ಲೆಯ ಉತ್ತರ ಭಾಗದ ಜನತೆಯ ಮಾತೃಭಾಷೆ

ಕನ್ನಡವೇ ಆಗಿದೆ. ಈ ಎರಡೂ ಜಿಲ್ಲೆಯ ಉತ್ತರ ಪ್ರದೇಶಗಳು ರಾಜಕೀಯ ಪ್ರಭಾವಕ್ಕೆ ಈಡಾಗಿ, ಮರಾಠಿಯ ಒತ್ತಡಕ್ಕೆ ಸಿಲುಕಿದುದರಿಂದ ಮಾತ್ರವೇ ಕನ್ನಡತನಕ್ಕೆ ಹೊರತಾಗಿ, ಹೊರಗಾಗಿ ಉಳಿಯುಲಾರವು. ಮನೆ ನಾಡಿನ ತತ್ವವನ್ನನುಸರಿಸಿ, ಜನಾಭಿಪ್ರಾಯವನ್ನು ಸಂಗ್ರಹಿಸಿದಂದು ಈ ಭಾಗವೆಲ್ಲವೂ ಬೃಹತ್ ಕರ್ನಾಟಕದ ವಿಶ್ವಾಸದ ಭೂಮಿಯಾಗಿ ಬರುವಲ್ಲಿ ಸಂದೇಹವೇ ಇಲ್ಲ.

ಇನ್ನು ಚಿಕ್ಕ ಪುಟ್ಟ ಸಂಸ್ಥಾನಗಳ ಮಾತೇ ಈಗ ಉಳಿದಿಲ್ಲ. ಹೈದರಾಬಾದನ್ನು, ಹೈದರಾಬಾದಿನ ಜನತೆಯ ಅಭಿಪ್ರಾಯದ ಮೇರೆಗೆ ಭಾಷೆಯ ತಳಹದಿಯಮೇಲೆ, ವಿಂಗಡಿಸಿ ಆಂಧ್ರಪ್ರಾಂತಕ್ಕೆ, ಮಹಾರಾಷ್ಟ್ರಕ್ಕೆ, ಕರ್ನಾಟಕಕ್ಕೆ ಹಂಚಿ ಕೊಟ್ಟರೆ, ಮೈಸೂರಿನ ಪ್ರಶ್ನೆಯೊಂದು ಉಳಿಯುತ್ತಿದೆ. ಮೈಸೂರು ಹರಿನಾರಾಣೆ ಕನ್ನಡದ ಭೂಮಿ. ಕನ್ನಡತನಕ್ಕೆ ಹೊರತಾದವರು ಕನ್ನಡಿಗರು ಹೇಗಾದರು ? ಹಿಂದುಸ್ಥಾನದ ನಕ್ಷೆಯನ್ನೇ ಬದಲು ಮಾಡಿದ ಸರದಾರರು ಮನಸ್ಸುಮಾಡಿದ್ದರೆ ಒಕ್ಕೂಟ ಕರ್ನಾಟಕದಲ್ಲಿ ಮೈಸೂರು, ಹೈದರಾಬಾದು, ಕೊಡಗು ಪ್ರದೇಶಗಳು ಸೇರಿ ಹೋಗಿ, ಸುಂದರವಾದ ಬೃಹತ್ ಕರ್ನಾಟಕವು ಮೂಡಿನಿಂತು, ಭರತ ಚಕ್ರೇಶ್ವರೀಯ ಕೊರಲ ಹಾರದ ಮಧ್ಯ, ಬೆಲೆಬಾಳುವ ರತ್ನದಂತೆ, ದೇದಿಪ್ಯಮಾನವಾಗಿ ರಾರಾಜಿಸುತ್ತಿದ್ದಿತು!

ಒಂದು ವೇಳೆ, ಮೈಸೂರು ಬರಲೊಪ್ಪದಿದ್ದರೆ, ಹೈದರಾಬಾದನ್ನು ವಿಂಗಡಿಸುವುದಕ್ಕೆ ಸಾಧ್ಯ ವಿರದಿದ್ದರೆ, ಈಗಿರುವ ಪ್ರದೇಶವನ್ನೇ ಒಂದುಗೂಡಿಸಿ, ಒಕ್ಕೂಟ ಕರ್ನಾಟಕಕ್ಕೊಂದು ಸುವ್ಯವಸ್ಥಿತ ರೂಪವನ್ನುಕೊಟ್ಟು, ಅದಕ್ಕೊಂದು ಪ್ರತ್ಯೇಕ ರಾಜ್ಯದಾಡಳಿತದ ಸೌಕರ್ಯವನ್ನು ಒದವಿಸಿಕೊಟ್ಟಿದ್ದರೂ ಅದು ಸಮರ್ಥ ಪ್ರಾಂತವಾಗಿ, ತನ್ನ ಕಾಲ ಮೇಲೆ ತಾನೇ ನಿಂತು, ಸರಿದೊರೆಯ ಪ್ರಾಂತಗಳೊಂದಿಗೆ ಮುನ್ನಡೆಯ ಬಹುದಾಗಿದ್ದಿತು. ಒಕ್ಕೂಟ ಕರ್ನಾಟಕದ ವಿಸ್ತಾರ ೩೨,೫೭೪ ಸಾವಿರ ಚದುರು ಮೈಲು. ಅದರ ಜನಸಂಖ್ಯೆ ೭೧,೨೦,೧೫೬. ಒಕ್ಕೂಟ ಕರ್ನಾಟಕದ ಜನ ಸಂಖ್ಯೆಯು ಹಾಲಂಡ, ನೇಪಾಳ ಇಲ್ಲವೆ ಬೆಲ್ಜಿಯಮ್ ದಷ್ಟಾಗುವದು. ಒಂದು ರಾಷ್ಟ್ರವಾಗಿ ನೆಲೆ ನಿಂತು, ಇಂದು ಪ್ರಪಂಚದಲ್ಲಿಯೇ ಕೀರ್ತಿ, ಸಂಪತ್ತುಗಳನ್ನುಸಾಧಿಸುವ

ದಕ್ಕೆ ಹಾಲಂಡ, ಬೆಲ್ಜಿಯಮ್ ಗಳಿಗೆ ಸಾಧ್ಯವಾಗಿದ್ದರೆ, ಒಕ್ಕೂಟ ಕರ್ನಾಟಕಕ್ಕೆ, ಅದೇಕೆ ಅಸಾಧ್ಯವಾಗಿ ಪರಿಣಮಿಸಬೇಕೋ ತಿಳಿಯದಾಗಿದೆ. ಮೈಸೂರು, ಹೈದರಾಬಾದುಗಳು ಒಕ್ಕೂಟ ಕರ್ನಾಟಕದಲ್ಲಿ ಬಂದು ಸೇರಿದರಂತೂ ಬೃಹತ್ ಕರ್ನಾಟಕದ ಭವ್ಯ ಭವಿಷ್ಯತ್ತು, ಅಂಗೈ ನೆಲ್ಲಿಯ ಕಾಯಿಯಾಗಿ ಪರಿಣಮಿಸಬಹುದು.

ದುರ್ದೈವ! ಕರ್ನಾಟಕದ ಭವಿಷ್ಯತ್ತಿನ ಮಾತು 'ಬಹುದು ಗಿಹುದಿನ' ಮಾತೇ ಆಗಿ ಉಳಿಯಿತು. ಆಳುವ ವರ್ಗ ಐಕ್ಯತೆಯಲ್ಲಿ ಭಿನ್ನತೆಯನ್ನೂ ಅವಿಭಾಜ್ಯದಲ್ಲಿ ವಿಭಜನೆಯನ್ನೂ ಕಂಡರು. ಒಂದಾಗಬಹುದಾಗಿದ್ದ ಕರ್ನಾಟಕವನ್ನು ಅವರು ನಡಿಸಿ ಕೊಡಲಿಲ್ಲ. ಕನ್ನಡಿಗರ ದಾರಿದ್ರ್ಯದ, ಕರುಣದ ಕತೆಗೆ ಇನ್ನೂ ಮುಕ್ತಾಯವಿಲ್ಲವೇ? ಎಂದು ಕನ್ನಡಿಗರ ತಾಯಿ, ಎರಡು ಕೋಟಿ ಕನ್ನಡಿಗರನ್ನು ಕೇಳುತ್ತಿದ್ದಾಳೆ.

ಅವರ ಉತ್ತರ ಏನು?

---

# ಪ್ರಶ್ನೆಗೆ ಉತ್ತರ.

ಬೃಹತ್ ಕರ್ನಾಟಕ ನಿರ್ಮಾಣದ ಸಮಸ್ಯೆ, ನಾಡಿನ ಮುಂದೆ ಬಂದು ನಿಂತಾಗ, ಮೈಸೂರು ತಳೆದ ಧೋರಣೆಯೇ ವಿಚಿತ್ರವಾಗಿದೆ. 'ಮೈಸೂರೆನ್ನಿ, ಕನ್ನಡವೆನ್ನಿ, ಮಲ್ಲಿಗೆಯೆನ್ನಿ' ಎಂದು ಕವಿ ಹಾಡಿದ ನುಡಿಯನ್ನು ಮೈಸೂರೇ ಮರೆಯಿತು, ಮೀರಿತು. ಒಕ್ಕೂಟ ಕರ್ನಾಟಕವನ್ನು ಮೈಸೂರು ಈಗ ಸೇರಬೇಕು, ನಾಡಿನ ಸರ್ವತೋಮುಖವಾದ ಏಳ್ಗೆಯ ದೃಷ್ಟಿಯಿಂದ-ಎಂದು ಕನ್ನಡದ ಹಿರಿಯರು ಹೇಳಿದಾಗ ಮೈಸೂರು 'ಚಕ್ರ' ಕೊಟ್ಟಿತು. ಹೊರಗಿನ ಜಗತ್ತು ಹೇಗೋ ಅರ್ಥಮಾಡಿಕೊಂಡಿತು. 'ಮೈಸೂರಿಗರು ವಿಲಯನಕ್ಕೆ ಸಿದ್ಧವಿಲ್ಲ. ಒಕ್ಕೂಟ ಕರ್ನಾಟಕದೊಂದಿಗೆ ನೆರೆಯಬಾರದು'-ಎಂಬ ಮಾತು ಒಕ್ಕೂಟ ಕರ್ನಾಟಕದ ಜನತೆಗೆ ತಿಳಿಯುವುದಕ್ಕಿಂತ ಮೊದಲೇ ಹೊರಗಿನವರಿಗೆ ಮುಟ್ಟಿತು. ಬಹಳ ಸೋಜಿಗದ ಸುದ್ದಿ. ಮೈಸೂರು, ಬೆಂಗಳೂರು ನಗರಗಳನ್ನು ಬಿಟ್ಟು-ಇನ್ನುಳಿದ ಪ್ರದೇಶದಲ್ಲಿ ಸುತ್ತಾಡಿ ಬಂದರೆ-ಸಂಸ್ಥಾನದ ಹೃದಯ ಸ್ಪಂದನ ಯಾರಿಗೂ ಗೊತ್ತಾಗಬಹುದು. ಮೈಸೂರು ಸಂಸ್ಥಾನವೆಂದರೆ ಮೈಸೂರು ಬೆಂಗಳೂರು ಅಲ್ಲ; ಮೈಸೂರು ಕಟ್ಟಿದವರು ಮಿರ್ಜಾ. ಬೆಂಗಳೂರು ಕಟ್ಟಿದವರು ಬಣಜಿಗರು. ಇವೆರಡನ್ನು ಬಿಟ್ಟರೆ, ಉಳಿದ ದೇಶವನ್ನು ಕಟ್ಟಿದವರೆಲ್ಲ ಹಳ್ಳಿಗರು. ಅವರ ಮಧ್ಯ ತಿರುಗಾಡಿ, ಅಭಿಪ್ರಾಯ ಸಂಗ್ರಹಿಸಿಕೊಂಡು ಬಂದರೆ, ಮೈಸೂರು ಒಕ್ಕೂಟ ಕರ್ನಾಟಕದಲ್ಲಿ ಬೆರೆಯುವುದಕ್ಕೆ ಒಪ್ಪುತ್ತದೆಯೊ? ಇಲ್ಲವೊ? ಎಂಬ ಸಂಗತಿ ಸ್ಪಷ್ಟವಾಗಿ ತಿಳಿದು ಬರುವುದು.

ನೂರರಲ್ಲಿ ಐವತ್ತರಷ್ಟು ಮೈಸೂರಿಗರು ಬೃಹತ್ ಕರ್ನಾಟಕದ ಯೋಜನೆಯನ್ನು ಮುಕ್ತಮನಸ್ಸಿನಿಂದ ಮನ್ನಿಸುತ್ತಾರೆ, ಎನ್ನುವಲ್ಲಿ ಯಾರಿಗೂ ಸಂದೇಹ ಬೇಡ. ಇನ್ನು ಇಪ್ಪತ್ತೈದರಷ್ಟು ಜನ ಅತ್ತಲೂ ಇಲ್ಲ, ಇತ್ತಲೂ ಇಲ್ಲ. ಇನ್ನುಳಿದ ಇಪ್ಪತ್ತೈದರಷ್ಟು ಜನ ಆಶೆ, ಆಮಿಷಗಳಿಗಾಗಿ ಬಾಯಿ ತೆರೆದವರು. ಒಂದು ಗುಂಪು ಕಟ್ಟಿಕೊಂಡು, ಸ್ವಂತದ ಬೇಳೆಯನ್ನು

ಬೇಯಿಸುವುದಕ್ಕೆ ಹೊಂಚು ಹಾಕಿದ ಸ್ವಾರ್ಥಲಾಲಸಿಗಳು. ಮೈಸೂರಿನ ರಾಜಕಾರಣದ ಸೂತ್ರ ಇವರ ಕೈಯಲ್ಲೆ. ಮೈಸೂರು ಒಕ್ಕೂಟ ಕರ್ನಾಟಕ ದಲ್ಲಿ ಒಂದು ಗೂಡಿ ಹೋದರೆ ನಾಳೆ ಅಧಿಕಾರ ಕೈಬಿಡಬಹುದಲ್ಲ! ಎಂಬ ಅಂಜಿಕೆ ಇವರಿಗೆ. ಮೈಸೂರಿನ ಮಲೆನಾಡ ಪ್ರದೇಶವಾದ ಶಿವಮೊಗ್ಗೆ, ಹಾಸನ, ಚಿಕ್ಕಮಗಳೂರು, ತುಮಕೂರು ಪ್ರದೇಶವನ್ನು ಸುತ್ತಾಡಿ ಬಂದರೆ, ನೂರಕ್ಕೆ ನೂರರಷ್ಟು ಜನತೆ ಕೈಯೆತ್ತಿ ಹೇಳುತ್ತಾರೆ :- ಇಗೋ ಮಹಾ ಕರ್ನಾಟಕದ ಸಂಭ್ರಮದ ಸ್ವಾಗತಕ್ಕೆ ಮಂಗಳಾರತಿ ! ಎಂದು.

ಜನಾಭಿಪ್ರಾಯವನ್ನು ವ್ಯಕ್ತಪಡಿಸದೆ, ಮೈಸೂರಿನ ವಾರ್ತಾಪತ್ರಿಕೆಗಳು ತಮ್ಮ ವ್ಯವಸಾಯಕ್ಕೇ ಎರಡು ಬಗೆದವು. ಏಕೀಕರಣದ ವಿಷಯದ ಮೇಲೆ ಕೆಲವು ಪತ್ರಿಕೆಗಳು ಮೌನ ತಳೆದವು. ಕೆಲವು ಪತ್ರಿಕೆಗಳು ಬಹಿರಂಗವಾಗಿ ಒಕ್ಕೂಟ ಕರ್ನಾಟಕಕ್ಕೆ ಆಹ್ವಾನವನ್ನೆಸೆದವು. 'ಆರ್ಕಾಟರಿಗೆ ಬಾಯ್ಕಾಟ್' ಎಂದು ಘೋಷಿಸುತ್ತ, ಸರಕಾರದೊಂದಿಗೆ ಅಸಹಕಾರ ಹೂಡಿದಾಗ ಒಕ್ಕೂಟ ಕರ್ನಾಟಕವಿತ್ತ ಸ್ನೇಹಾದರಗಳನ್ನು ಮೈಸೂರಿಗರು ಮರೆತರು. 'ಚಲೇ ಜಾವ್' ಚಳವಳಿಯ ದಿನಗಳಲ್ಲಿ ತಲೆ ಮರಿಸಿಕೊಂಡು ಬಂದವರಿಗೆ ಆಶ್ರಯ ವನ್ನಿತ್ತ ಒಕ್ಕೂಟ ಕರ್ನಾಟಕದ ಪ್ರೇಮ ವಿಶ್ವಾಸಗಳನ್ನು ಅವರು ನೆನೆಯ ದಾದರು. 'ಮಹಾ ಕರ್ನಾಟಕದಲ್ಲಿ ಮೈಸೂರು ಸೇರದಿದ್ದರೆ, ಮೈಸೂರಿ ಗಿದೋ ಅಸಹಕಾರ' ಎಂದು ಒಕ್ಕೂಟ ಕರ್ನಾಟಕದ ಬಿಸಿ ನೆತ್ತರಿನ ಯುವ ಕರು ಘೋಷಿಸಿದಾಗ:- 'ಎನ್ನಿರಿ. ಸಂಸ್ಥಾನದ ಸೆರೆಮನೆಗಳು ತೆರೆದಿವೆ' ಎನ್ನುವಂತಹ ಘನತೆಯನ್ನು ಮೈಸೂರಿಗರು, ಅವರ ವೃತ್ತ ಪತ್ರಿಕೆಗಳು, ಆವರ ರಾಜಕಾರಣಿಗಳು ಮೆರೆದರು. ಆ ಹೊತ್ತಿನಲ್ಲಿ ಮೈಸೂರಿನ ಕನ್ನಡದ ಸ್ವಾಭಿಮಾನ, ಯಾವ ಧರ್ಮಶಾಲೆಯಲ್ಲಿ ಮಲಗಿದ್ದಿತೊ ಏನೊ!

ಸ್ವಾರ್ಥವನ್ನು ಮುಂದೆ ಮಾಡಿಕೊಂಡು, ಮೈಸೂರಿನ ಲೀನೀಕರಣ ವನ್ನು ವಿರೋಧಿಸುತ್ತಿದ್ದವರು, ಈ ಕಾಲದಲ್ಲಿ, ಬಾಯಿಂದ ಬಾಯಿಗೆ. ಅಪ ಪ್ರಚಾರದ ವಾರ್ತೆಯನ್ನರುಹುತ್ತ ಸಮಸ್ತ ಕರ್ನಾಟಕದ ಹಿತವನ್ನೇ ಹಾಳು ಮಾಡಿದರು. ತಮ್ಮ ಅಭಿಪ್ರಾಯವನ್ನು ಸಮರ್ಥಿಸಲೆಂದು ಅವರು ಕೊಟ್ಟ ಕಾರಣಗಳು ಇವು. ೧) ಮೈಸೂರಿನ ಮೂರು ನಾಲ್ಕಾಂಶ ಜನರು ವಿಲೀ ನಕ್ಕೆ ಒಪ್ಪುವುದಿಲ್ಲ. ೨) ಏಕೀಕರಣದ ಸಂಬಂಧದಲ್ಲಿ ಮೈಸೂರಿಗರು

ಕಾಂಗ್ರೆಸ್ಸಿನ ಅಭಿಪ್ರಾಯವನ್ನು ಮನ್ನಿಸಲಾರರು. ೩) ಮೈಸೂರು ವಿಲೀನ ಹೊಂದಿದರೆ ಮೈಸೂರಿಗರ ಜೀವನ ಮಟ್ಟ ಕೆಳಗಿಳಿಯುವುದು. ೪) ಔದ್ಯೋಗಿಕ ಪ್ರಪಂಚದಲ್ಲಿ ಮುನ್ನಡೆದ ಮೈಸೂರು ಲೀನೀಕರಣ ಹೊಂದಿದರೆ ಅದರ ಉದ್ಯೋಗಗಳು ಹಿಂದೆ ಬಿದ್ದು, ಆರ್ಥಿಕ ಮಟ್ಟ ಕುಸಿಯುವುದು. ೫) ಮೈಸೂರಿನ ಬಹು ಸಂಖ್ಯಾಕ ಶಾಸನ ಸಭಾ ಸದಸ್ಯರು ಲೀನೀಕರಣಕ್ಕೆ ಬೆಂಬಲ ಕೊಡುವುದಿಲ್ಲ. ೬) ಮೈಸೂರನ್ನು ಒಕ್ಕೂಟ ಕರ್ನಾಟಕದಲ್ಲಿ ಸೇರಿಸಿದರೆ ಮೈಸೂರು ಸರಕಾರದ ಅಸ್ತಿತ್ವವೇ ಉಳಿಯಲಾರದು.

ಅರ್ಥರಹಿತವಾದ ಇಂತಹ ಮಾತುಗಳನ್ನು ಮುಂದೆ ಮಾಡಿಕೊಂಡು ಸಂಸ್ಥಾನದಲ್ಲಿ ಅವರು ಪ್ರಚಾರ ನಡಸಿದರು. ಬುದ್ಧಿವಂತರು ಇಂತಹ ಮಾತುಗಳಿಗೆ ಬೆಲೆ ಕೊಡಬಾರದು. ಇವೊತ್ತು ಮೈಸೂರು ದೇಶದಲ್ಲಿ, ಬೃಹತ್ ಕರ್ನಾಟಕದ ನಿರ್ಮಾಣ ಕಾರ್ಯದ ಬಗೆಗೆ ಜನಾಭಿಪ್ರಾಯವನ್ನು ನಾವು ಸಂಗ್ರಹಿಸಿದ್ದಾದರೆ ನೂರಕ್ಕೆ ಐವತ್ತರಷ್ಟು ಜನ ಖಂಡಿತ ಬೆಂಬಲು ಕೊಡುವರು. ಮೈಸೂರು ಮತ್ತು ಒಕ್ಕೂಟ ಕರ್ನಾಟಕದ ಆರ್ಥಿಕ ಪ್ರಪಂಚವನ್ನು ಅಭ್ಯಸಿಸಿದ ಅರ್ಥಶಾಸ್ತ್ರಜ್ಞರು:—ಅವೆರಡರ ಆತ್ಮ ಸಮ್ಮಿಲನದಲ್ಲಿ ಒಕ್ಕೂಟ ಕರ್ನಾಟಕಕ್ಕಿಂತ ಹೆಚ್ಚಾಗಿ ಮೈಸೂರಿನ ಅಭಿವೃದ್ಧಿಯನ್ನೇ ಕಂಡಾರು. ಮೈಸೂರಿನ ಬಹು ಸಂಖ್ಯಾಕ ಶಾಸನ ಸಭಾ ಸದಸ್ಯರು ಒಂದು ವೇಳೆ ಲೀನೀಕರಣಕ್ಕೆ ವಿರೋಧಿಸುವದೇ ನಿಜವಿದ್ದಲ್ಲಿ, ಅವರು ಜನತೆಯ ಅಭಿಪ್ರಾಯವನ್ನು ಪ್ರತಿನಿಧಿಸುತ್ತಿಲ್ಲವೆಂಬ ಮಾತು ಇನ್ನೂ ಸ್ಪಷ್ಟವಾಗುವುದು. ಒಕ್ಕೂಟ ಕರ್ನಾಟಕದೊಂದಿಗೆ ಸೇರಿದ ಮಾತ್ರಕ್ಕೆ ಮೈಸೂರು ಸರಕಾರದ ಅಸ್ತಿತ್ವವೇ ಇಲ್ಲವಾಗುವುದೆಂದು ನಂಬುವವರು ಮಂಕು ತಿಮ್ಮರೇ ಸರಿ!

ಕೆಲವು ಮೈಸೂರಿಗರಿಗೆ ಒಂದು ತೆರನಾದ ಬುದ್ಧಿ ಭ್ರಮಣೆ ಉಂಟಾದಂತೆ ಕಂಡು ಬರುತ್ತದೆ. ತಾವೇ ಬುದ್ಧಿವಂತರು, ತಾವೇ ಸುಸಂಸ್ಕೃತರು. ತಮ್ಮ ನೆಲವೇ ಚಿನ್ನದ ನಾಡು; ತಮ್ಮ ಭೂಮಿಯೇ ಕುಶಲತೆಯ ಬೀಡು—ಎಂಬ ಅಹಂಕಾರ ಕೆಲವರಲ್ಲಿ ಇದ್ದಂತೆ ತಿಳಿಯುತ್ತದೆ. ಅಹಂಕಾರಕ್ಕೆ ಒಂದು ಮಿತಿ ಇದೆ. ಹೆಚ್ಚಿಗೆ ಅದು ಇದ್ದರೆ ಊರುಭಂಗಕ್ಕೀಡಾಗಬೇಕಾಗುತ್ತದೆಯೆಂಬ ಸಂಗತಿ ಅವರಿಗೆ ಎಷ್ಟು ಬೇಗ ತಿಳಿದೀತೋ ಅಷ್ಟು ಒಳ್ಳೆಯದೆಂದು ತೋರುತ್ತಿದೆ. ಗೂಗೆ ಅಣಕಿಸಿ ನುಡಿದರೆ ಸುರಲೋಕವೇನೂ

ಹಾಳಾಗಲಾರದು. ಮುಗಿಲ ಮಲ್ಲಿಗೆಯನ್ನು ಮೂಸುವುದನ್ನು ಬಿಟ್ಟು ಜನ ಸಾಮಾನ್ಯರೊಂದಿಗೆ ಬೆರೆತು ಬಂದಾಗ, ಮೈಸೂರು, ಬೆಂಗಳೂರುಗಳನ್ನು ಬಿಟ್ಟುಬಡಹಳ್ಳಿಗರ ಕಡೆಗಷ್ಟು ನೋಡಿದಾಗ ಜನತೆಗೆ ಬಂದಡರಿದ ದಾರಿದ್ರ್ಯ, ಬವಣೆಗಳು ಇವರಿಗೆ ಗೊತ್ತಾಗದಿರಲಾರವು. ಆಗ ಇವರಿಗೆ ಒಕ್ಕೂಟ ಕರ್ನಾಟಕದ ಮಿಲನದಲ್ಲಿಯೇ ಅಖಂಡ ಕರ್ನಾಟಕದ ಉತ್ತರೋತ್ತರ ಅಭ್ಯುದಯವಿದೆಯೆಂದು ಅನ್ನದೆ ಇರಲಾರರು.

ಒಕ್ಕೂಟ ಕರ್ನಾಟಕದಲ್ಲಿ ಸೇರುವುದರಿಂದ ಮುಂದುವರಿದ ಮೈಸೂರಿನ ಪ್ರಗತಿಯ ಓಟಕ್ಕೆ ಅಡ್ಡಿ, ಆತಂಕಗಳುಂಟಾಗಬಹುದೆಂದು ಮೈಸೂರಿಗರ ನಂಬುಗೆಯಿದ್ದರೆ ಅದು ಸಮಂಜಸವಾದುದಲ್ಲ. ಎಂಬುದನ್ನು ಅವರು ಆದಷ್ಟು ಬೇಗ ಅರಿತು ಕೊಳ್ಳುವದು ಲೇಸು. ಒಂದೆರಡು ದಿಶೆಯಲ್ಲಿ ಮೈಸೂರು ಒಕ್ಕೂಟ ಕರ್ನಾಟಕವನ್ನು ಹಿಂದಿರಿಸಿ, ಮುಂದೆ ಹೋಗಿರ ಬಹುದು. ಆದರೆ ಅಷ್ಟರಿಂದಲೇ ಮೈಸೂರಿಗರು ಪ್ರಗತಿಶೀಲರು, ಮೈಸೂರಿ ಗರು ಬುದ್ಧಿವಂತರೆಂದು ಭಾವಿಸಿ ಮುಂದಿನ ಏಳ್ಗೆಯ ಮೇಲೆ ಕಲ್ಲು ಹಾಕು ವುದು ಸರಿಯಾಗಲಾರದು. ವಿಲಯನಕ್ಕೆ ಒಪ್ಪದ ಮೈಸೂರಿಗರ ಗಮನಕ್ಕೆ ಒಕ್ಕೂಟ ಕರ್ನಾಟಕ ಮತ್ತು ಮೈಸೂರು ಕರ್ನಾಟಕದ ಆಹಾರ ಸಂಪತ್ತಿನ, ಔದ್ಯೋಗಿಕ ಸಂಪತ್ತಿನ ರೂಪ ರೇಷೆಗಳನ್ನು ಮಾತ್ರ ಇಲ್ಲಿ ಸಂಗ್ರ ಹಿಸಿ ಕೊಡಬಹುದು. (೧) ಯಾಂತ್ರಿಕ ಬಲ ಸಂವರ್ಧನೆಯಿಂದ ಮೈಸೂರು ಪ್ರಗತಿಪರ ಸಂಸ್ಥಾನವಾಗಿದ್ದರೂ ಅದು ಆಹಾರದ ವಿಷಯದಲ್ಲಿ ಇನ್ನೂ ಸ್ವಾವಲಂಬಿಯಾಗಿಲ್ಲ. ಒಕ್ಕೂಟ ಕರ್ನಾಟಕ ಮತ್ತು ಹೈದರಾಬಾದ ಕರ್ನಾ ಟಕಗಳು ಸ್ವಾವಲಂಬಿಯಾಗಿರುವುದು ಮಾತ್ರವಲ್ಲದೆ ಉಳಿತಾಯದ ಪ್ರಾಂತ ಗಳೂ ಆಗಿವೆ. ಒಕ್ಕೂಟ ಕರ್ನಾಟಕದ ಕಪ್ಪು ಭೂಮಿ ಜಗತ್ತಿನಲ್ಲಿಯೇ ಸುಪ್ರಸಿದ್ಧವಾದ ಭೂಮಿಯೆಂದೆನ್ನಿಸಿಕೊಂಡಿದೆ. ಸಾಗುವಳಿಗೆ ಬಿದ್ದಿರುವ ಈ ಭೂಮಿ ಸುಮಾರು ೭೨, ೬೩೦೦೦ ಎಕರೆ ಆಗಬಹುದು. ಮೈಸೂರು ಕರ್ನಾಟಕದಲ್ಲಿ ೬೫ಲಕ್ಷ ಎಕರೆ ಭೂಮಿ ಮಾತ್ರ ಬಿತ್ತಿಗೆಗೆ ಸಿದ್ಧವಾಗಿರುವದು. ಹೈದರಾಬಾದು ಕರ್ನಾಟಕದಲ್ಲಿ ೪೪ ಲಕ್ಷ ಎಕರೆ ಭೂಮಿಯನ್ನು ಸಾಗುವ ಳಿಗೆ ಹಾಕಲಾಗಿದೆ. ಮೈಸೂರು ಕರ್ನಾಟಕದಲ್ಲಿ ೧೦ ಲಕ್ಷ ಎಕರೆ ಭೂಮಿ ನೀರಾವರಿಯ ಯೋಜನೆಗೆ ಒಳಗಾಗಿರುವದು ಅದೇ; ಒಕ್ಕೂಟ ಕರ್ನಾಟಕ

ದಲ್ಲಿ ಸುಮಾರು ೨ ಲಕ್ಷ ಎಕರೆ ಭೂಮಿ ನೀರಾವರಿಯನ್ನು ಕಂಡಿದೆ. ಇಷ್ಟಾದರೂ ಮೈಸೂರು ಕರ್ನಾಟಕವು ಆಹಾರ ಸ್ವಾವಲಂಬನೆಯನ್ನು ಪಡೆದಿಲ್ಲ. ತೊಗರಿ, ಅವರೆ ಮುಂತಾದ ದ್ವಿದಳ ಧಾನ್ಯಕ್ಕಾಗಿ ಅದು ಪರ ಪ್ರಾಂತದ ಕಡೆಗೆ ಕಣ್ಣೆತ್ತಿ ನೋಡಬೇಕಾಗುವದು. ಒಕ್ಕೂಟ ಕರ್ನಾಟಕದಲ್ಲಿ ಸುಮಾರು ೯ ಲಕ್ಷ ಎಕರೆ ಭೂಮಿಯಲ್ಲಿ ಗೋದಿಯನ್ನು ಬೆಳಸಲಾಗುವದು. ಮೈಸೂರಿನಲ್ಲಿ ಗೋದಿಯ ಉತ್ಪಾದನೆಯೇ ಇಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಗೋಡಂಬೆ, ಮಾವಿನ ಹಣ್ಣುಗಳು, ನೀಲಗಿರಿಯ ನೀಲಗಿರಿ ತೈಲ, ನಿಪ್ಪಾಣಿಯ ತಂಬಾಕು, ಬಾರ್ಸಿ, ಸೊಲ್ಲಾಪುರಗಳ ಅಕ್ಕಡಿ ಕಾಳುಗಳು ಮೈಸೂರಿನ ಪಾಲಿಗಿಲ್ಲನೇ ಇಲ್ಲ. ಅಕ್ಕಿ ಮತ್ತು ಕಾಫಿಯನ್ನು ಮೈಸೂರು ಸಾಕಷ್ಟು ಬೆಳೆಯುವದು. ಇಷ್ಟನ್ನು ಬಿಟ್ಟರೆ ಎಣ್ಣೆಯ ಕಾಳು, ದ್ವಿದಲ ಧಾನ್ಯ, ಮುಂತಾದ ಆಹಾರ ಸಾಮಗ್ರಿಗಳಿಗಾಗಿ ಮೈಸೂರು ಪರ ಪ್ರಾಂತವನ್ನು ಅವಲಂಬಿಸಬೇಕಾಗುವದು.

(೭) ಹತ್ತಿಯ ಉತ್ಪಾದನೆಯಲ್ಲಿಯೂ ಮೈಸೂರು ಮುಂದುವರೆದಿಲ್ಲ. ಒಕ್ಕೂಟ ಕರ್ನಾಟಕದ ಹತ್ತಿ ಬೆಳೆಯುವ ಹದಿನೇಳು ಲಕ್ಷ ಎಕರೆ ಭೂಮಿ ವಿಶ್ವ ವಿಖ್ಯಾತಿಯನ್ನು ಪಡೆದಿದೆ. ಮೈಸೂರು ಏಳು ಲಕ್ಷಕ್ಕಿಂತ ತುಸು ಹೆಚ್ಚು ಎಕರೆ ಭೂಮಿಯಲ್ಲಿ ಹತ್ತಿಯನ್ನು ಬಿತ್ತುವುದು. ೧೯೪೩-೪೪ನೆಯ ಸಾಲಿನ ವರದಿಯ ಮೇಲಿಂದ ಹಿಂದುಸ್ಥಾನವು ಜಗತ್ತಿನ ಹತ್ತಿಯ ಉತ್ಪಾದನೆಯಲ್ಲಿ ಎರಡನೆಯ ಸ್ಥಾನವನ್ನು ಪಡೆದುದನ್ನು ಕಾಣುತ್ತೇವೆ. ಒಟ್ಟು ಜಗತ್ತಿನ ಉತ್ಪಾದನೆ ೨೫,೬೪೬೦೦೦ ನಗ ಇವರಲ್ಲಿ ಅಮೇರಿಕಾ ೧೧೧,೩೮೦೦೦. ಹಿಂದುಸ್ಥಾನ ೫,೨೫,೮೦೦೦, ಇಜಿಪ್ತ,೮೮೪,೦೦೦. ನಗ ಬೆಳೆಯುತ್ತಿವೆ. ಹಿಂದುಸ್ಥಾನದ ಹತ್ತಿಯ ಉತ್ಪಾದನಾಭಾಗದಲ್ಲಿ ಕರ್ನಾಟಕವು ಪ್ರತಿವರುಷ ೩೮, ೬೫೦೦೦ ನಗಕ್ಕೆ ಕಡಿಮೆ ಇಲ್ಲದಷ್ಟು ಹತ್ತಿಯನ್ನು ಕೊಡುವುದು. ಒಕ್ಕೂಟ ಕರ್ನಾಟಕದ ಗಿರಣಿಗಳಲ್ಲಿ ಪ್ರತಿ ವರುಷ ಐದು ಲಕ್ಷ ಗಂಟುಗಳನ್ನು ಕಟ್ಟಲಾಗುವುದು. ಆದೇ ಮೈಸೂರಿನ ಹತ್ತಿಯ ಉತ್ಪಾದನೆ ಅಲ್ಲಿರುವ ಗಿರಣಿಗಳಿಗೆ ಸಾಲದು. ಒಕ್ಕೂಟ ಕರ್ನಾಟಕದಲ್ಲಿ ಇರುವ ೩೨೨ ಜಿನ್ನುಗಳಲ್ಲಿ ಹನ್ನೆರಡು ಸಾವಿರ ಕೆಲಸಗಾರರು ದುಡಿಯುತ್ತಿದ್ದರೆ ಮೈಸೂರು ಕರ್ನಾಟಕದಲ್ಲಿ ೮೧ ಜಿನ್ನುಗಳಿದ್ದು ಅವುಗಳಲ್ಲಿ ೨೫೬೦ ಕೆಲಸಗಾರರು ದುಡಿಯು

ತ್ತಿರುವರು. ಇಷ್ಟಾದರೂ ವೈಸೂರು ತನ್ನ ಗಿರಣಿಗೆ ಹೊರಗಿನಿಂದ ಹತ್ತಿಯನ್ನು ತರಿಸಬೇಕಾಗುವದು.

೩) ಔದ್ಯೋಗಿಕ ಪ್ರಪಂಚದಲ್ಲಿ ವೈಸೂರು ಮತ್ತು ಒಕ್ಕೂಟ ಕರ್ನಾಕದ ಹೋಲಿಕೆಯೂ, ಅದೇ ರೀತಿ ಇದ್ದುದು ಕಂಡು ಬರುವುದು. ಒಕ್ಕೂಟ ಕರ್ನಾಟಕದಲ್ಲಿ ೩೦ ವರ್ಕಶಾಪುಗಳು ಮತ್ತು ೪ ಸಾವಿರ ಕೆಲಸಗಾರರಿದ್ದರೆ, ವೈಸೂರು ಕರ್ನಾಟಕದಲ್ಲಿ ೩೭ ವರ್ಕಶಾಪುಗಳಿದ್ದು ಅವುಗಳಲ್ಲಿ ಎರಡು ಸಾವಿರದಷ್ಟು ಕೆಲಸಗಾರರಿರುವರು. ಮಂಗಳೂರಿನ ಹಂಚುಗಳಂತೂ ಸುಪ್ರಸಿದ್ಧವಾಗಿವೆ. ಮಂಗಳೂರಲ್ಲಿ ಹಂಚಿನ ಕಾರಖಾನೆಗಳು ೪೩ ಇದ್ದು ಅವುಗಳಲ್ಲಿ ೩೪೦೦೦ ಜನರು ದುಡಿಯುತ್ತಿರುವರು. ವೈಸೂರು ಈ ದಿಶೆಯಲ್ಲಿ, ಕುಂಟಿಗೋ ಕೂರಿಗೊ ಅನ್ನುತ್ತಿದೆ. ಅಲ್ಲಿ ೧೫ ಕಾರಖಾನೆಗಳಿದ್ದು ಅವುಗಳಲ್ಲಿ ಸಾವಿರ ಕೆಲಸಗಾರರು ಮಾತ್ರ ದುಡಿಯುತ್ತಿರುವರು.

ನೂಲಿನ ಗಿರಣಿಗಳ ವಿಷಯದಲ್ಲಿ ಮಾತ್ರ ವೈಸೂರು ಮುಂದುವರೆದಿದೆ. ಅದಕ್ಕೆ ಕಾರಣವೆಂದರೆ ವೈಸೂರಿನ ವಿದ್ಯುತ್ ಉತ್ಪಾದನಾ ಕೇಂದ್ರಗಳೆನ್ನಬಹುದು. ಮುಂಬಯಿಯ ಕಟಾಕ್ಷಕ್ಕೆ ಪಕ್ಕಾದ ಒಕ್ಕೂಟ ಕರ್ನಾಟಕಕ್ಕೆ ಇನ್ನೂ 'ಬೆಳಕು' ಇಲ್ಲದಿದ್ದರೂ, ಅದು ಇದ್ದುದರಲ್ಲಿಯೇ, ಸಾಧಿಸಿದ ಪ್ರಗತಿ ಗಮನಾರ್ಹವಾಗಿದೆ. ಸಿಮೆಂಟು, ಗಾಜು ಕಾರಖಾನೆಗಳಲ್ಲಿ ಒಕ್ಕೂಟ ಕರ್ನಾಟಕ ಮುಂದರಿದಿದ್ದರೆ ತೊಗಲು ಹದಮಾಡುವುದು, ಬಂಗಾರದ ಖಣಿ ಇವುಗಳಲ್ಲಿ ವೈಸೂರು ಮುಂದುವರಿದಿದೆ. ಈ ಕೆಲವು ದಿಶೆಯಲ್ಲಿ ವೈಸೂರು ಪ್ರಗತಿಯನ್ನು ಸಾಧಿಸುವುದಕ್ಕೆ ಸರಕಾರದ ಭಂಡವಲು ಸಹಾಯಕಾರಿಯಾಗಿದೆ. ವೈಸೂರಿನಲ್ಲಿ ಸರಕಾರ ಉಪಯೋಗಿಸಿದ ಭಂಡವಲಿಗೂ, ಮುಂಬಯಿಯಲ್ಲಿ ಸರಕಾರ ಉಪಯೋಗಿಸಿದ ಭಂಡವಲಿಗೂ ಬಹಳ ಅಂತರವಿದೆ. ಸುಮಾರು ಒಂಬತ್ತು ಕೋಟಿ ಹಣವನ್ನು ಮುಂಬಯಿ ಸರಕಾರ, ಒಕ್ಕೂಟ ಕರ್ನಾಟಕದ ಉದ್ಯೋಗದಲ್ಲಿ ತೊಡಗಿಸಿದ್ದರೆ, ೧೯ಕೋಟಿ ಹಣವನ್ನು ವೈಸೂರು ಸರಕಾರ ತೊಡಗಿಸಿದೆ. ಆದರೆ ಅದೇ ಒಕ್ಕೂಟ ಕರ್ನಾಟಕದಲ್ಲಿ ಖಾಸಗಿ ಭಂಡವಲವನ್ನು ಉದ್ಯೋಗಗಳಲ್ಲಿ ಅಪಾರವಾಗಿ ಹಾಕಲಾಗಿದೆ. ಸುಮಾರು ನಾಲ್ಕು ಕೋಟಿ ಖಾಸಗಿ ಹಣವನ್ನು ಒಕ್ಕೂಟ ಕರ್ನಾಟಕದ ಔದ್ಯೋಗಿಕ ಪ್ರಪಂಚದಲ್ಲಿ ತೊಡಗಿಸಿದ್ದು ಕಂಡುಬಂದರೆ, ವೈಸೂರಿನಲ್ಲಿ ಅಡಕವಾದ ಹಣ ಒಂದು ಕೋಟಿಯಷ್ಟು ಮಾತ್ರ ಆಗಬಹುದು. ಇವತ್ತು ವೈಸೂ

ರಿಗೆ ಇರುವ ಸ್ವಾಯತ್ತತೆ, ಒಕ್ಕೂಟ ಕರ್ನಾಟಕಕ್ಕೂ ಬಂದರೆ ಅದು ಸಾಧಿಸಬಹುದಾದ ಪ್ರಗತಿಯ ಕಲ್ಪನೆ ಮೈಸೂರಿಗರಿಗೆ ಇರಬಹುದಲ್ಲವೆ ?

೪) ಮೈಸೂರು, ಒಕ್ಕೂಟ ಕರ್ನಾಟಕದೊಂದಿಗೆ ಸೇರಿದರೆ ಉದ್ಯೋಗದಲ್ಲಿ ತೊಡಗಿಸಿದ ಆದರ ಭಂಡವಲು ಅಲ್ಲೇ ಉಳಿದು, ಆದರ ಉದ್ಯೋಗಗಳು ಹಿಂದೆ ಬಿದ್ದು, ತನ್ಮೂಲಕ ಅದಕ್ಕೆ ಹಾನಿಯಾಗಬಹುದೆಂದು, ಮೈಸೂರಿಗರ ಹಾನಿಯೇ ಒಕ್ಕೂಟ ಕರ್ನಾಟಕದ ಲಾಭವೆಂದು ಮೈಸೂರಿಗರಿಗೆ ಅನ್ನಿಸಿದ್ದರೆ ಅದು ಭ್ರಮನಿರಸನವೇ ಎಂದು ಹೇಳಬಹುದು. ಮೈಸೂರು ತನ್ನ ಉದ್ಯೋಗಗಳಲ್ಲಿ ೬೧ ಕೋಟಿ ರೂಪಾಯಿಗಳಷ್ಟು ಭಂಡವಲವನ್ನು ತೊಡಗಿಸಿದ್ದರೆ, ಒಕ್ಕೂಟ ಕರ್ನಾಟಕ ೧೪ ಕೋಟಿ ರೂಪಾಯಿಗಳನ್ನು ತೊಡಗಿಸಿದೆ. ನಿಜ; ಆದರೆ ಇದರ ಜೊತೆಗೆ ಒಕ್ಕೂಟ ಕರ್ನಾಟಕದಲ್ಲಿರುವ ಅಪಾರವಾದ ಕಚ್ಚಾಮಾಲನ್ನು ಲಕ್ಷ್ಯಕ್ಕೆ ತಂದುಕೊಂಡರೆ, ಆ ಸಂಪತ್ತಿನ ಮುಂದೆ ಮೈಸೂರು ತಲೆ ತಗ್ಗಿಸಿಕೊಂಡು ನಿಲ್ಲಬೇಕಾಗುವುದು. ಒಕ್ಕೂಟ ಕರ್ನಾಟಕದ ನೆಲವೆಲ್ಲ ನೀರಾವರಿಯ ಯೋಜನೆಯನ್ನು ಕಂಡರೆ, ನಾವು ನಿಂತ ನೆಲ ಚಿನ್ನದ ನಾಡಾಗುವಲ್ಲಿ ಸಂದೇಹವಿಲ್ಲ. ವಿಜಾಪುರ, ಬೆಳಗಾವಿ ಜಿಲ್ಲೆಗಳಲ್ಲಿ ಘಟಪ್ರಭಾ ನದಿಯ 'ದಡ್ಡೀ ಯೋಜನೆ,' ಕಾರವಾರ ಜಿಲ್ಲೆಯ ಕಾಳೀ ನದಿ, ಬಿಡ್ತೀ ನದಿ, ಕಾವೇರಿ ನದಿಯ ಯೋಜನೆ, ಹಿರಣ್ಯಕಾಶಿ ನದಿಯ ಯೋಜನೆ, ಬಳ್ಳಾರಿ ಜಿಲ್ಲೆಯ ತುಂಗಭದ್ರಾ ನದಿಯ ನೀರು—ಇವುಗಳ ನೀರು ಕನ್ನಡಿಗರ ನೆಲಕ್ಕೆ ಒದವಿ ಬಂದರೆ ಒಕ್ಕೂಟ ಕರ್ನಾಟಕವು ಮಳೆಯ ನೀರನ್ನು ಅವಲಂಬಿಸಿ ನಿಲ್ಲಬೇಕಾಗಿಲ್ಲ. ಕಪ್ಪತ ಗುಡ್ಡದ ಬಂಗಾರದ ಖಣಿ, ಖಾನಾಪುರದ ಚೀನೀ ಮಣ್ಣು, ಧಾರವಾಡ, ಬೆಳಗಾವಿ, ಉತ್ತರ ಕನ್ನಡ ಜಿಲ್ಲೆಯ ಮ್ಯಾಂಗನೀಜ ಲೋಹ, ಬಾಗಿಲಕೋಟೆ, ಬದಾಮಿ, ಮುದ್ದೇಬಿಹಾಳದ ಸುಣ್ಣದ ಕಲ್ಲು,—ಇತ್ಯಾದಿ ಕಚ್ಚಾಮಾಲನ್ನು ನಾವು ನಮ್ಮ ಕೈಗೆ ಬರುವಂತೆ ಮಾಡಿಕೊಂಡರೆ ಒಕ್ಕೂಟ ಕರ್ನಾಟಕವು ಔದ್ಯೋಗಿಕ ಪ್ರಪಂಚದಲ್ಲಿ ಸಾಕಷ್ಟು ಸಂಪತ್ಸಮೃದ್ಧಿಯನ್ನು ಹೊಂದಬಹುದಿತ್ತು. ಒಕ್ಕೂಟ ಕರ್ನಾಟಕದಿಂದ ಹೊರಗೆ ಕಳಿಸುವ ಹತ್ತಿಯನ್ನು ಇಲ್ಲಿಯೇ ಇರಿಸಿಕೊಂಡು, ಧಾರವಾಡ ಹುಬಳ್ಳಿಗಳಲ್ಲಿ ವಿದ್ಯುತ್ ಶಕ್ತಿಯ ಮೂಲಕ ನೂಲಿನ ಗಿರಣಿಗಳನ್ನು ನಾವು ಸ್ಥಾಪಿಸಿದ್ದೇ ಆದರೆ, ಹದಿಮೂರು ಲಕ್ಷ ಭೂಮಿಯಲ್ಲಿ ಬೆಳೆಯುವ ಎಣ್ಣೆಯಕಾಳನ್ನು ನಾವು ಇಲ್ಲಿಯೇ ಆಯಿಲ್ ಮಿಲ್ಲುಗಳನ್ನು ಸ್ಥಾಪಿಸಿ, ಉಪ

ಯೋಗಿಸಿಕೊಂಡರೆ–ಒಕ್ಕೂಟ ಕರ್ನಾಟಕ ಎಷ್ಟೊಂದು ಔದ್ಯೋಗಿಕ ಪ್ರಗತಿಯನ್ನು ಹೊಂದಬಲ್ಲದು ?

ಒಕ್ಕೂಟ ಕರ್ನಾಟಕದಂತೆಯೇ ಮೈಸೂರಿನ ಮಲೆನಾಡ ಪ್ರದೇಶ ಇನ್ನೂ ಹಿಂದುಳಿದಿದೆ. ಹೈದರಾಬಾದು; ಮೈಸೂರು, ಒಕ್ಕೂಟ ಕರ್ನಾಟಕ ಒಂದಾಗಿ, ಕರಣತ್ರಯದಿಂದ ಬೃಹತ್ ಕರ್ನಾಟಕದ ಭವ್ಯಸಿದ್ಧಿಸಾಧನೆಗೆ ದುಡಿಯತೊಡಗಿದರೆ ಅದರ ಸಂಪತ್ತು, ಅದರ ಪ್ರಗತಿ ಯಾರನ್ನೂ ಬೆರಗುಗೊಳಿಸುವಲ್ಲಿ ಸಂದೇಹವೇನು ? ಹೀಗೆ ಇಡಿಯ ನಾಡಿನ ಹಿತವನ್ನು ಬಗೆಯದೆ, ತನ್ನ ಬೆಳಕೇ ತನಗೆ ಹಗಲು, ಉಳಿದ ಬೆಳಕು ಕತ್ತಲು ಎಂದು ಮೈಸೂರು ಅನ್ನುತ್ತಿದ್ದರೆ ಅದಕ್ಕೇನು ಉಪಾಯ?

ಮೈಸೂರು ಬೇರೆ, ಒಕ್ಕೂಟ ಕರ್ನಾಟಕ ಬೇರೆ ಎಂಬ ಅಜ್ಞಾನ ತೊಲಗಿ, ಅಹಂಕಾರವಳಿದು, ಒಂದು ಮನೆಯವರಂತೆ, ಒಂದು ಬಳಗದವರಂತೆ ಉಭಯತರೂ ನಡೆದುಕೊಂಡರೆ ಆಗ ಕನ್ನಡದ ಬದುಕು ಸಮಗ್ರ, ಸುಂದರ ಬದುಕಾಗುವುದು. ನಮ್ಮೂರು ಚೆಂದವೋ?– ನಿಮ್ಮೂರು ಚೆಂದವೊ? ಎಂದು ಮೈಸೂರ ಹುಡುಗಿ ಧಾರವಾಡದ ಹುಡುಗನಿಗೆ ಪ್ರಶ್ನೆ ಕೇಳಿದರೆ ನಾವು ಏನೆಂದು ಉತ್ತರ ಹೇಳೋಣ ?

ಮೈಸೂರು ಮಂಚ. ಧಾರವಾಡವೇ ಕನಸು. ಮಂಚದ ಮೇಲೆ ಕುಳಿತು ಕನ್ನಡದ ಕನಸು ಕಂಡ ಪ್ರೇಮಿಗಳ ಕತೆಯನ್ನು ವಿಸ್ತರಿಸಿ ಹೇಳಬೇಕೆ ? ಪ್ರಪಂಚಕ್ಕೆ ಪ್ರಪಂಚವನ್ನೇ ಒಂದು ಮಂಚವನ್ನಾಗಿ, ಒಂದು ಕನಸನ್ನಾಗಿ, ಒಂದು ಪ್ರೇಮವನ್ನಾಗಿ ಕಾಣುವಂತಾಗಬೇಕೆಂದು ಅಂತರರಾಷ್ಟ್ರೀಯ ವ್ಯಕ್ತಿಗಳು ಸಂದೇಶ ಕೊಡುತ್ತಿರುವ ಈ ಸಂಧಿಕಾಲದಲ್ಲಿ ಮೈಸೂರು ಬೆಂಗಳೂರುಗಳು, ಬೆಳಗಾವಿ ಸೊಲ್ಲಾಪುರಗಳು, ಕಾರವಾರ ಬಳ್ಳಾರಿಗಳು ಒಂದು ಕುಟುಂಬಕ್ಕೆ ಏಕೆ ದೂರವಾಗಬೇಕು ? ಮೈಸೂರಿನ ಶ್ರೀಗಂಧ, ಬೆಂಗಳೂರಿನ ಭಾಗ್ಯ, ಶಿವಮೊಗ್ಗೆಯ ಪ್ರೇಮ, ಕಾರವಾರದ ಸೌಂದರ್ಯ, ಸೊಲ್ಲಾಪುರದ ಸಿರಿವಂತಿಕೆ, ಬಳ್ಳಾರಿಯ ಗಡಸುಗಾರಿಕೆ, ಧಾರವಾಡದ ಗಟ್ಟಿಗತನ, ಹುಬ್ಬಳ್ಳಿಯ ದುಡಿಮೆ, ಇವೆಲ್ಲ ಸಮ್ಮಿಲನವಾಗಿ ನಮ್ಮ ಬದುಕು ಮೃದು ಮಧುರವಾಗಬೇಕು, ಸತ್ಯವಾಗಬೇಕು, ಸುಂದರವಾಗಬೇಕು—ಎಂಬಾಶೆ ಕನ್ನಡಕ್ಕೆ ಬೇಡವೆ, ಕನ್ನಡತನಕ್ಕೆ ಬೇಡವೆ? ಒಕ್ಕೂಟ ಕರ್ನಾಟಕ ಕೇಳುವ ಈ ಪ್ರಶ್ನೆಗೆ ಮೈಸೂರು ಇನ್ನಾದರೂ ಕೊಡುವ ಉತ್ತರವೇನು ?

---

## ಕಾರವಾರಿಗರೂ, ಕೊಂಕಣೀಸಾಹಿತ್ಯ ಚಳವಳಿಯೂ

ನಮ್ಮ ಕಾಲ ಭಾಷೆಯ ಪುನರುಜ್ಜೀವನದ ಕಾಲವೆಂದೇ ಹೇಳಬೇಕು. 'ಸತ್ತ ಭಾಷೆ'ಗಳೂ ಕೂಡ ಎದ್ದು ಆಡ್ಡಾಡಹತ್ತಿವೆ. ಈ "ಪೆನ್ಸಿಲಿನ್" ಯುಗದಲ್ಲಿ ಮೃತಭಾಷೆಗಳೂ, ರಾಜ ಭಾಷೆಗಳಾಗಲು ಹವಣಿಸುತ್ತಿದ್ದರೆ ನಾವಾರೂ ಆಶ್ಚರ್ಯಪಡಬೇಕಿಲ್ಲ.

ಕೊಂಕಣ ಪಟ್ಟಿಯಲ್ಲಿ ಮುಖ್ಯವಾಗಿ ಕಾರವಾರ ಜಿಲ್ಲೆಯ ಉತ್ತರ ಪ್ರದೇಶದಲ್ಲಿ ಇಂತಹದೊಂದು ಚಳವಳಿ ಇತ್ತೀಚೆಗೆ ಅವ್ಯಾಹತವಾಗಿ ನಡೆಯುತ್ತಿದೆ. ದಕ್ಷಿಣ ಕನ್ನಡಜಿಲ್ಲೆ ಮತ್ತು ಉತ್ತರ ಕನ್ನಡಜಿಲ್ಲೆಗಳನ್ನು ಆವರಿಸಿಕೊಂಡಿರುವ ಕೊಂಕಣ ಪಟ್ಟಿ ಮುಂಬಯಿ ಪ್ರಾಂತದಲ್ಲಿ ಇಂದು ತಲೆಯೆತ್ತ ತೊಡಗಿದೆ. ಕೊಂಕಣಿಗರು ಮಹತ್ವಾಕಾಂಕ್ಷೆಯಿಂದ ಪ್ರೇರಿತರಾಗಿದ್ದಾರೆ. ಉತ್ತರದ ಕಡೆಯವರು ಮುಂಬೈ ಹಿಡಿದು, ದಕ್ಷಿಣದವರು ಮಂಗಳೂರನ್ನು ಹಿಡಿದು, ಮಧ್ಯೆ ಕೆಲವರು ಗೋವಾ ಸೇರಿ ಇಂದು ಹೊಸ ಹೊಸ ಕನಸುಗಳನ್ನೂ, ಭೂವ್ಯೋಮಗಳನ್ನೂ ಒಂದುಗೂಡಿಸುವ ಹಂಬಲವನ್ನೂ ತಳೆದಿದ್ದಾರೆ.

'ಕೊಂಕಣ ಪಟ್ಟಿ ಪ್ರತ್ಯೇಕ ಪ್ರಾಂತವಾಗಬೇಕು. ಮುಂಬಯಿಯೇ ಆದರ ರಾಜಧಾನಿಯಾಗಬೇಕು. ಕೊಂಕಣೀ ಬೋಧ ಭಾಷೆಯಾಗಬೇಕು,' ಎಂಬ ಧೀರೋದಾತ್ತ ಆಕಾಂಕ್ಷೆಯನ್ನು ಇಂದು ಕೊಂಕಣಿಗರು ತಳೆದಿರುವದನ್ನು ಕೇಳಿ ಯಾರೂ ಗಾಬರಿ ಪಡಬೇಕಾಗಿಲ್ಲ. ಆಶಾವಾದಿಯಾಗುವದು ಮನುಷ್ಯನ ಸ್ವಭಾವ !

ಆದರೂ ಐಕ್ಯತೆಯಲ್ಲಿ ಭಿನ್ನತೆಯಾಗಿರುವದು ಸೃಷ್ಟಿಯ ನಿಯಮವಷ್ಟೆ! ಎಂತಲೇ ಕೊಂಕಣಿಗರಲ್ಲೂ ಜನರಿದ್ದಷ್ಟು ಭಿನ್ನತೆಗಳಿವೆ. ಕೆಲವರಿಗೆ ಭಾರತೀಯತ್ವಕ್ಕಿಂತ ಕೊಂಕಣಿತನವೇ ಅತ್ಯಂತ ಪ್ರಿಯವಾದುದು. ಮೊದಲು ಕೊಂಕಣಪಟ್ಟಿ, ನಂತರ ಹಿಂದುಸ್ಥಾನ. ಮೊದಲು ಕೊಂಕಣಿ

ಭಾಷೆ, ನಂತರ ಹಿಂದೀ. ಕೊಂಕಣದ ಉದ್ಧಾರವಾದ ಮೇಲೆ ಹಿಂದುಸ್ಥಾನದ ಮಾತು; ಎನ್ನುವ ಪ್ರಭೃತಿಗಳು ಕೊಂಕಣ ಪಟ್ಟಿಯಲ್ಲಿ ಕಡಿಮೆಯೇನೂ ಇಲ್ಲ. ಅವರ ಬಳಗ ದಿನದಿನವೂ ಹಬ್ಬುತ್ತಲೇ ಇದೆ.

ಇನ್ನು ಕೆಲವರಿದ್ದಾರೆ; ಕನ್ನಡವೂ ಬೇಡ, ಮರಾಠಿಯೂ ಬೇಡ, ಇವುಗಳ ನಡುವೆ ಸಿಕ್ಕು ನಾವು ಸಾಯುವದೂ ಬೇಡ. ಅವರೂ ಹೊರಡಲಿ, ಇವರೂ ಹೊರಡಲಿ; ಕೊಂಕಣಿಗರ ಉದ್ಧಾರವನ್ನು ನಾವು ಮಾಡಿಕೊಳ್ಳುತ್ತೇವೆ–ಎನ್ನುವ ಕ್ರಾಂತಿ ಪುರುಷರು—ಈ ಎರಡು ದಶಕಗಳಲ್ಲಿ ಸಾಕಷ್ಟು ಹುಟ್ಟುತ್ತಲಿದ್ದಾರೆ.

ನಿಜವಾದ ಮಾತೆಂದರೆ ಕೊಂಕಣೀ "ಸತ್ತ ಭಾಷೆ." ಅದಕ್ಕೆ ಗ್ರಂಥಸ್ಥ ಭಾಷೆ ಇಲ್ಲ. ವ್ಯಾಕರಣವಿಲ್ಲ. ಸಾಹಿತ್ಯವಿಲ್ಲ. ಅದು ಬರೀ ಮಾತನಾಡುವ ಭಾಷೆ. ಎಲ್ಲ ಭಾಷೆಗಳಿಗೆ ಇರುವಂತೆ ಕೊಂಕಣೀ ಭಾಷೆಯಲ್ಲಿಯೂ ಜಾನಪದ ಸಾಹಿತ್ಯವಿದೆ; ದಂತ ಕತೆಗಳು, ಯವನ ಯಾಮಿನೀಯರ ಕತೆಗಳೂ ಇವೆ.

ಈ ಮಾತನಾಡುವ ಭಾಷೆಯನ್ನು ಗ್ರಂಥಸ್ಥ ಭಾಷೆಯನ್ನಾಗಿ ಮಾಡಬೇಕೆಂದು ಹಂಬಲಿಸಿ ಅನೇಕ ಕೊಂಕಣೀ ಪ್ರೇಮಿಗಳು ಕೊಂಕಣೀ ಭಾಷಾದೇವತೆಗೆ "ಪೆನ್ಸಿಲಿನ್" ಇಂಜಕ್ಶನ್ ಕೊಟ್ಟು, ಅದನ್ನು ಹುರಿದುಂಬಿಸುತ್ತಿದ್ದಾರೆ.

ಅಂತಹರಲ್ಲಿ ಶಣೈ ಗೋಯಿಬಾಬ್, ಎಂ. ಎಂ. ಶಾನಭಾಗ, ಮಂಗೇಶರಾವ ತೆಲಂಗ, ಬಿ. ಬಿ. ಬೋರಕರ, ಕಾಮತ್ ಮೊದಲಾದವರು ಪ್ರಮುಖರೆಂದು ಹೇಳಬಹುದು.

ಶಣೈ ಗೋಯಿಬಾಬ್ ಗೋವಾದಲ್ಲಿದ್ದವರು. ಕೊಂಕಣೀ ಭಾಷೆಯನ್ನು ಜೀವಂತ ಭಾಷೆಯನ್ನಾಗಿ ಮಾಡಬೇಕೆಂಬಾಶೆಯಿಂದ ಪ್ರೇರಿತರಾಗಿ, ಶ್ರೀಯುತರು ಕೊಂಕಣಿಯಲ್ಲಿ ನಾಟಕಗಳನ್ನೂ ಸಣ್ಣ ಕತೆಗಳನ್ನೂ ಬರೆದರು. ಈ ದಿಶೆಯಲ್ಲಿ ಶಣೈ ಅವರು ಬಹಳ ಪರಿಶ್ರಮ ವಹಿಸಿದರು. ಶ್ರೀಯುತರು ''ಜ್ಞಾನೇಶ್ವರಿ'' ಯಲ್ಲಿಯೂ ಕೂಡ ಕೊಂಕಣೀ ಮಾತುಗಳು, ಶಬ್ದ ಪ್ರಯೋಗಗಳು ಇರುವವೆಂದು ಪ್ರತಿಪಾದಿಸಿರುವರು.

ದಿವಂಗತ ಎಂ. ಎಂ. ಶಾನಭಾಗರು ಕೊಂಕಣೀ ಭಾಷೆಯ ಅಧ್ವರ್ಯುಗಳು. ಇವರನ್ನು ಕೊಂಕಣೀ ಪ್ರೇಮಿಗಳು 'ಗುರೂಜಿ' ಎಂದು ಕರೆಯುವರು. ಕೊಂಕಣೀ ಅತ್ಯಂತ ಪ್ರಭಾವಶಾಲಿಯಾದ ಭಾಷೆ, ಎಂಬುದನ್ನು ಶಾನಭಾಗರು ತಮ್ಮ ಜೀವಿತಾವಧಿಯ ವರೆಗೂ ವಿಸ್ತರಿಸುತ್ತ ಕಂಠಶೋಷಣೆ ಮಾಡಿಕೊಂಡರು. ಕೊಂಕಣಿಯು ಮರಾಠಿಯ ಉಪಭಾಷೆಯಲ್ಲ. ಆದೊಂದು ಸ್ವತಂತ್ರ ಭಾಷೆ. ಅದರ ಸಾಹಿತ್ಯ ಅಪಾರವಿದೆ. ಅದು ಎಂತಹ ಭಾವನೆಗಳನ್ನೂ ತನ್ನ ವಾಣಿಯ ಮೂಲಕ ಪ್ರತಿಪಾದಿಸಬಲ್ಲ ಪ್ರಭಾವಶಾಲಿ ಭಾಷೆಯೆಂಬುದನ್ನು ಶಾನಭಾಗರು ಬಹಳ ಜೋರಿನಿಂದ, ಎತ್ತಿ ಎತ್ತಿ ಹೇಳಿದರು. ಇವರು ಕೊಂಕಣಿಗಾಗಿ ಬಹಳ ಮಾತನಾಡಿದರು. ಆದರೆ ತುಸು ಕೆಲಸ ಮಾಡಿದರು.

ಕಾಮತ್ ಇನ್ನೊಬ್ಬರು. ಕಾರವಾರದ ಹೈಸ್ಕೂಲಿನ ನಿವೃತ್ತ ಹೆಡ್ ಮಾಸ್ತರರು. ಕೊಂಕಣಿ, ರಾಜಭಾಷೆಯೂ ಕೂಡ ಆಗಬಲ್ಲದೆಂಬುದನ್ನು ತೋರಿಸಲಿಕ್ಕೆ ಕಾಮತರವರು ಮರಾಠಿಯ ಲಿಪಿಯಲ್ಲಿ ಒಂದು ಪತ್ರಿಕೆ ಹೊರಡಿಸಿದರು. ಆವೇಶವಷ್ಟು ಕಡಿಮೆ ಆದಾಗ ಪತ್ರಿಕೆ ಕಾಮತರಿಗೆ ನೆನಪು ಆದಾಗೊಮ್ಮೆ ಪ್ರಕಟವಾಗತೊಡಗಿತು.

ನಾಲ್ಕೈದು ವರುಷಗಳ ಹಿಂದೆ ಕೊಂಕಣಿಯ ಭಾಷೆಯ ಬಗೆಗೆ ಇಬ್ಬರು ಕೊಂಕಣಿಗರಲ್ಲಿ ಬಹಳ ವಾಗ್ವಾದವಾಯಿತು. ಎ. ಕೆ. ಪ್ರಿಯೊಳಕರ್ ಮತ್ತು ತೆಲಂಗ ಮಂಗೇಶರಾವ ಇಬ್ಬರೂ ಚರ್ಚೆ ಬೆಳಸಿದರು. ಕಾರವಾರದ ತೆಲಂಗ ಇವರು ವೀಣಾವಾದನ ಪಟು, ಸಂಸ್ಕೃತ ಪಂಡಿತರು. ಕೊಂಕಣೀ ಉಪಭಾಷೆಯಲ್ಲ, ಅದು ಜೀವಂತ ಭಾಷೆ; ಎಂದು ಅವರಿಬ್ಬರೂ ಬಹಳ ಕಾಲದವರೆಗೆ ಚರ್ಚೆ ನಡಸಿ, ಏನೊಂದೂ ತೀರ್ಮಾನಕ್ಕೆ ಬರಲೇ ಇಲ್ಲ.

ಅಂತೂ ಕೊಂಕಣಿ ಭಾಷೆಯ ಉದ್ಧಾರಕ್ಕಾಗಿ ಈ ರೀತಿ ಒಂದೇ ಸವನೆ, ಕಳೆದ ಎರಡು ಮೂರು ದಶಕಗಳಿಂದ ಚಳವಳಿ ನಡದೇ ಇದೆ. ಈ ಚಳವಳಿಗಾರರು ಕೆಲವು ಆಧಾರಗಳನ್ನು ಮುಂದೆ ಮಾಡಿಕೊಂಡು, ತಮ್ಮ ಕಾರ್ಯದ ಹಂಬುಗೆಯನ್ನು ವಿಸ್ತರಿಸ ಬಯಸಿದ್ದಾರೆ.

ಪೋರ್ತುಗೀಜರು ಬಂದರು. ಅದೇ ಮೊದಲು ಗೋವಾದಲ್ಲಿ ಬಂದು ಲಂಗರು ಊರಿದಾಗ, ಪೋರ್ತುಗೀಜರ ಕಿವಿಗೆ ಕೊಂಕಣಿ ಭಾಷೆಯು ಬಿದ್ದಿತು. ಸಾಮ್ರಾಜ್ಯ ಲಾಲಸಿಗಳೂ, ಧರ್ಮ ಪ್ರಚಾರಕರೂ ಆದ ಅವರು ಹೊತ್ತು ಸಾಧಿಸಿ ಕೊಂಕಣೀ ಭಾಷೆಯಲ್ಲಿ ಬೈಬಲ್ಲನ್ನು ಪರಿವರ್ತಿಸಿದರು. ಇನ್ನೂ ಬೇರೆ ಬೇರೆ ತಮ್ಮ ಮತಗ್ರಂಥಗಳನ್ನು ಅನುವಾದಿಸಿದರು.

ಕೊಂಕಣಿಗಳಿಗೆ ಅಷ್ಟೇ ಸಾಕಾಯಿತು. ಅವರು ಇನ್ನೂರೈವತ್ತು ವರುಷಗಳ ಹಿಂದೆ ಅನುವಾದಿತವಾದ ಈ ಮತ ಗ್ರಂಥಗಳನ್ನು ಕೈಮಾಡಿ ತೋರಿಸುತ್ತ ಕೊಂಕಣಿಯ ಆಳ್ವಿಕೆಯ ದಿನಮಾನಗಳನ್ನು ಕಾಣ ಬಯಸಿದರು.

ವಸ್ತುಸ್ಥಿತಿ ಹೀಗೆ ಕೊಂಕಣೀ ಭಾಷೆ ಮರಾಠಿಯ ಉಪಭಾಷೆ. ಕೊಂಕಣಿ ಮಾತನಾಡುವ ಜನತೆ ಕಾರವಾರದ ಮಧ್ಯಮ ತರಗತಿಯ ಜನತೆ. ಜನಸಾಮಾನ್ಯರೆಲ್ಲ ಕನ್ನಡ ಮಾತನಾಡುತ್ತಾರೆ. ಕಾರವಾರ ಜಿಲ್ಲೆಯ ಹಳ್ಳಿಗರೆಲ್ಲರಿಗೂ ಕನ್ನಡವೇ ತಾಯ್ನುಡಿ. ಅದೇ ಅವರ ದಿನ ನಿತ್ಯದ ಭಾಷೆ.

ಉತ್ತರ ಕನ್ನಡ ಜಿಲ್ಲೆಯ ಅಂಚಿನಲ್ಲಿ ಮರಾಠಿ ಮಾತನಾಡುವ ಜನತೆಯನ್ನಷ್ಟು ಬಿಟ್ಟರೆ, ಇಡಿಯ ಕೊಂಕಣ ಪಟ್ಟಿಯಲ್ಲಿ ಕನ್ನಡ ಮಾತನ್ನಾಡುವವರೇ ಸಿಗುತ್ತಾರೆ. ತಿಳಿಗನ್ನಡದ ಕಾಸಾರದ ಮಧ್ಯದಲ್ಲಿ ಕಾರವಾರದ ಕೊಂಕಣಿಗರು ಕಲ್ಲು ಒಗೆದು, ಪ್ರಶಾಂತವಾದ ವಾತಾವರಣವನ್ನು ಹದಗೆಡಿಸಲು ಇಂದು ಸಜ್ಜಾಗಿರುವರೆಂದು ತಿಳಿದು ಬರುತ್ತದೆ.

ಕೊಂಕಣಿಗರಲ್ಲಿ ಇರುವ ಕೊಂಕಣಿತನದ ಹುಚ್ಚು ಭರತದೇಶದ ಇನ್ನಾವ ಜನಾಂಗದಲ್ಲಿಯೂ ಇಲ್ಲವೆಂದು ತೋರುತ್ತದೆ. ಪಾರ್ಸಿಗಳು ಕೊಂಕಣಿಗರಿಗೆ ಈ ದೃಷ್ಟಿಯಲ್ಲಿ ಸರಿಸಮಾನವಾಗಿ ಬಂದರೂ ಬಂದಾರು. ಅಂತೂ ಕೊಂಕಣಿ ಜನರು ಪ್ರತ್ಯೇಕತೆಯನ್ನು ಬಯಸುವವರು. ಮುಂಬಯಿಗೋ, ಮದ್ರಾಸಕ್ಕೊ, ಕಲಕತ್ತೆಗೊ, ಅತ್ತ ವಿದೇಶದಲ್ಲಿ ನ್ಯೂಯಾರ್ಕದಲ್ಲೊ, ಪ್ಯಾರಿಸದಲ್ಲೊ, ಲಂಡನ್ನದಲ್ಲಿಯೋ ನಾಲ್ಕು ಮಂದಿ ಕೊಂಕಣಿಗರನ್ನು ಇಟ್ಟರೆ ಅವರು 'ಕೊಂಕಣೀ ಸಂಘ'ವನ್ನು ಕಟ್ಟಿಯಾರೇ ಹೊರತು,

'ಕರ್ನಾಟಕ ಸಂಘ'ವನ್ನಗಲೀ, 'ಭಾರತೀಯ ಸಂಸ್ಥೆ'ಯನ್ನಾಗಲೀ ಸ್ಥಾಪಿಸುವವರಲ್ಲ.

ಹೊಸಗಾಲದ ಹುಚ್ಚು, ಪರಸ್ಪರ ಸಹಕಾರ ಸಂಘ, ತನ್ನತನ ಕೊಂಕಣಿಗರ ಈ ಮೂರು ಗುಣಗಳು ಇಂದು ಕೊಂಕಣ ಭಾಷಾ ಚಳುವಳಿಗೆ ಕಾರಣವಾಗಿವೆಯೆಂದು ಹೇಳಬಹುದು. ಪ್ರಥಮ ತರಗತಿಯ ಶ್ರೀಮಂತರು ಕೊಂಕಣಪಟ್ಟಿಯಲ್ಲಿ ಕೈ ಬೆರಳಿನಿಂದ ಎಣಿಸುವಷ್ಟು ಮಾತ್ರ ಇದ್ದಾರೆ. ಇನ್ನುಳಿದವರು ದುಡಿದು ಉಣ್ಣಬೇಕು. ಇದೊಂದು ಕಾರಣದಿಂದಾಗಿಯೇ ಕೊಂಕಣಿಗರು ಶಿಕ್ಷಣ ಪ್ರಪಂಚದಲ್ಲಿ ಮುಂದುವರೆಯುವ ಸಂದರ್ಭ ಒದಗಿತು. ಕಲಿತ ಕೊಂಕಣಿಗರು ಮುಂಬಯಿ ಹಿಡಿದರು. ಶ್ರೀಮಂತರು ದೊಡ್ಡ ದೊಡ್ಡ ಪಟ್ಟಣಗಳನ್ನು ಹಿಡಿದು ವ್ಯಾಪಾರಕ್ಕೆ ನಿಂತರು. ಸಾಮಾನ್ಯ ಜನತೆ ಕಾರವಾರ ಜಿಲ್ಲೆಯಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಿಂತು, ಅಂದಿನಂತೆ ಇಂದೂ ಕಷ್ಟ ಅನುಭವಿಸುತ್ತಾರೆ. ಅವರಿಗೆ ಕನ್ನಡವಾದರೆ ಕನ್ನಡ, ಮರಾಠಿ ಆದರೆ ಮರಾಠಿ. ಏನೂ ಇಲ್ಲವಾದರೆ ಕೊಂಕಣಿ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯ ಕೊಂಕಣಿಗರು ಕನ್ನಡದಲ್ಲಿ ಬರೆಯುತ್ತಾರೆ. ಕೊಂಕಣಿಯಲ್ಲಿ ಮಾತನಾಡುತ್ತಾರೆ. ಉತ್ತರ ಕನ್ನಡ ಜಿಲ್ಲೆಯಲ್ಲಿಯ ಕೆಲವರು ಅದೇ ರೀತಿ ಅನುಸರಿಸುತ್ತಾರೆ. ಆದರೆ ಕನ್ನಡಕ್ಕೆ ಆಗದವರು ಕೆಲವರು ಮರಾಠಿ ಹಿಡಿದು ಕನ್ನಡ ತೆಗಳಿ, ಕೊಂಕಣೀ ಭಾಷೆಯನ್ನು ಜೀವ ತುಂಬಿ ಎಬ್ಬಿಸುತ್ತಾರೆ.

ಎಂ. ಎಂ. ಶಾನಭಾಗರು ಸಂಸ್ಕೃತದಿಂದ, ಕನ್ನಡದಿಂದ ಕೊಂಕಣಿಗೆ ಕೆಲವು ಕವನಗಳನ್ನು ಅನುವಾದಿಸಿದರು. ಶಾನಭಾಗರು ಅನುವಾದವನ್ನು ಸುಂದರವಾಗಿ ಮಾಡಿರುವರು. ದಾಸರ "ಏನು ಬೇಡಲಿ ನಿನ್ನ ಬಳಿಗೆ ಬಂದು" ಎನ್ನುವ ಪದ್ಯವನ್ನು ಈ ರೀತಿ ಶ್ರೀಯುತರು ಅನುವಾದಿಸಿದ್ದಾರೆ.

ಕಿತ್ತೆಂ ಮಾಗ್ಗುಂ ಹಾಂವಂ ತುಜಲಾಗಿ ಏವ್ನು
ತುಂವೆಂ ದಿಲ್ಲಿವೆಂ ಸೌಭಾಗ್ಯ ಸಂಪೂರ್ಣ ಆಸ್ಸೂನೂ ||ಪಲ್ಲ||

ಜನನೀ ತೀದೀ ಹ್ಯೋಣು ಜಗಧೀಶಾ ಮಾಗ್ಗುಂವೇ ।
ಜನನೀ ನಿತ್ತೆಂ ದಿಲ್ಲೆಂ ತ್ಯಾಧ್ರುವ ರಾಯಾಕ ॥ ೧ ॥
ಜನಕು ತೊ ದೀ ಹ್ಯೋಣು ಜಗಧೀಶಾ ಮಾಗ್ಗುಂವೇ ।
ಜನಕಾನ ಕಿತ್ತೆಂ ಕೆಲ್ಲೆಂ ತ್ಯಾ ಪ್ರಹ್ಲಾದಾಕ ॥ ೨ ॥

ಶ್ರೀಹರಿಯ ಸ್ತವನವನ್ನು ಮಾಡುವ ಇನ್ನೊಂದು ಕವನದ ಅನುವಾದ ಶ್ರೀಯುತರು ಬಹಳ ಸುಂದರವಾಗಿ ಮಾಡಿರುವದನ್ನು ನಾವಿಲ್ಲಿ ಕಾಣಬಹುದಾಗಿದೆ.;

ಗೋವಿಂದಾ ನಮೋ ಗೋವಿಂದಾ ನಮೋ
ಗೋವಿಂದಾ ನಾರಾಯಣಾ ।
ಗೋವರ್ಧನಗಿರಿಕ ಉಕಳಿಲೊ
ಗೋವಿಂದಾ ತೂಂ ರಾಖ ಮಾಕ್ಕಾಂ ॥
ಧೀಟಾಯೀನ ರಾಜ್ಯಕರಾ
ಆ ಪುಡನು ನಂಬ್ಬಪಾ ಪಾಯಾಂಕ ।
ಆಪುಡುನು ಭಜಾವರ ಪುರಂದರ
ವಿಠ್ಠಲಾಲ್ಯಾ ಚರಣಾಂಕ ॥

ಶಾನಭಾಗರು ಬಹಳ ಯತ್ನ ಮಾಡಿದರು. ಆದರೆ ವ್ಯರ್ಥವಾಯಿತು. ಕೊಂಕಣಿ ಭಾಷೆಗೆ ಲಿಪಿಯಿಲ್ಲ, ವ್ಯಾಕರಣವಿಲ್ಲ, ಸಾಹಿತ್ಯವಿಲ್ಲ. ಆದರೂ ಅವರು ಏಕ ಮನಸ್ಸಿನಿಂದ ಆ ಕಾರ್ಯಕ್ಕಾಗಿ ಹೋರಾಡಿದುದು ಅಭಿನಂದನೀಯ.

ಇಂದು ಕೊಂಕಣೀ ಭಾಷೆಯ ಚಳವಳಿ ಅರಣ್ಯ ರೋದನವಾಗಿದೆ, ಗುಡ್ಡಕ್ಕೆ ಕಲ್ಲು ಹೊತ್ತಂತೆ. ಕೊಂಕಣಿಯ ಭಾಷಾ ಪ್ರೇಮಿಗಳು ವ್ಯರ್ಥ ಶ್ರಮಿಸುತ್ತಾರೆ. ಮೊಲದ ಕೋಡು ಕಾಣ ಬಯಸಿರುವ ಅವರ ಹಂಬಲ ಸಾರ್ಥಕ್ಯವನ್ನು ಹೊಂದಲಾರದು. ಮುಂಬೈ, ಮಂಗಳೂರುಗಳು ಅವರ ದಾರಿಯನ್ನು ಕಾಯಲಾರವು. ಮುಂಬೈಗೆ ಕನ್ನಡವೂ ಅಷ್ಟೆ, ಮರಾಠಿಯೂ ಅಷ್ಟೆ, ಗುಜರಾಥಿ, ತಮಿಳು, ತೆಲುಗುಗಳೂ ಅಷ್ಟೆ. ಉಪಜೀವನಕ್ಕೆ ದಾರಿಯನ್ನು ತೋರುವ ಅಂತರ್ ಪ್ರಾಂತೀಯ ನಗರ ಬದುಕಿನ ಮಾಂಗಲ್ಯವನ್ನು ತೋರಲಾರದು. ಮಂಗಳೂರು ಶುದ್ಧ ಕನ್ನಡದ ನಗರ. ಪಾದ್ರಿ

ಗಳು ಮೊದಲು ಅಲ್ಲಿ ಊರಿದ ಕನ್ನಡದ ಸಸಿ, ಇಂದು ಬೆಳೆದು ಹೆಮ್ಮರವಾಗಿ ನಿಂತು, ಕನ್ನಡದ ಕವಿಕೋಕಿಲ ಪಂಕ್ತಿಗೆ ಆಶ್ರಯುನನ್ನಿತ್ತಿದೆ. ಮುದ್ದಣ, ಪಂಜೆ, ಕಾಮತ, ಗೋವಿಂದ ಪೈ, ಶಿವರಾಮ ಕಾರಂತ ಅತ್ತಕಡೆಯಿಂದಲೆ ಬಂದವರು. ಮುಂಬೈಗೆ ಹೋಗಿ ಮರಾಠಿ ಹಿಡಿದವರಿಗೆ, ಮಂಗಳೂರಿಗೆ ಬಂದು ಕನ್ನಡ ಮರೆತವರಿಗೆ ಅತ್ತ ಅದೂ ಇಲ್ಲ, ಇತ್ತ ಇದೂ ಇಲ್ಲವಾದೀತು. ಕಾರವಾರಿಗರ ಹಿತಕಾರವಾರದ ನಾಲ್ಕು ಶ್ರೀಮಂತರಿಂದಾಗಲಿ, ಅವರ ಮರಾಠಿ ಮೋಹವನ್ನಾಗಲಿ, ಮಹಾರಾಷ್ಟ್ರಿಗರೊಂದಿಗೆ ಬೆಳೆಸಿದ ಬಾಂಧವ್ಯವನ್ನಾಗಲಿ, ಆ ಬಾಂಧವ್ಯದ ಮೂಲಕ ಎದ್ದ ಗೊತ್ತುವಳಿಗಳಿಂದಾಗಲಿ-ಸಾಧಿಸಲಾರದು. ಕಾರವಾರದ ಹೆಣ್ಣು ಮರಾಠಿ ಓದಿ,ಮುಂಬೈ ಸೇರಿದ ಮಾತ್ರಕ್ಕೇ ನಯ, ಸಂಸ್ಕೃತಿ, ಸಿರಿ, ಸೌಖ್ಯ ಬಂದಾವೆಂದು ಕಾರವಾರಿಗಳೂ, ಕೊಂಕಣಿ ಸಾಹಿತ್ಯಪ್ರಿಯರೂ ನಂಬಿದ್ದರೆ ಅದು ಶುದ್ಧ ತಪ್ಪು. ಕನ್ನಡವು ಯಾವಾಗಲೂ ಕಾರವಾರದ ಹಿತವನ್ನು ದಕ್ಷತೆಯಿಂದ ವಹಿಸಿಕೊಂಡು ಬಂದಿದೆ. ಹೊರಗಿನಿಂದ ಬಂದ ನಾಲ್ಕು ಅಧಿಕಾರಿಗಳು, ಮುಂಬೈಯಲ್ಲಿ ಓದಿ ಬಂದ ನಾಲ್ಕು ಕೊಂಕಣಿಗರು, ಎರಡು ದಿನ ಬಂದು ನಿಂತು ಮೂರು ಠರಾವು ಗೊತ್ತು ಮಾಡಿ ನಾಲ್ಕನೆಯ ದಿನ ಹೊರಟು ಹೋಗುವ ಸಮ್ಮೇಲನದ ಸದಸ್ಯರು ಕಾರವಾರಜಿಲ್ಲೆಯ ಉತ್ತರ ಪ್ರದೇಶ ಮರಾಠಿಮಯುವೆಂದು ಸಾರಿದಾಕ್ಷಣವೆ ಜನಸಾಮಾನ್ಯರು ಕನ್ನಡವನ್ನು ಮರೆತು ಮರಾಠಿಯನ್ನು ಎತ್ತಿಕೊಳ್ಳಲಾರರು. ಕಾರವಾರ ಸುಪಾ ಹಳ್ಳಿಯಾಳಗಳು ವಾದಗ್ರಸ್ತ ಪ್ರದೇಶವೆಂದೂ ಆಗಲಾರವು. ಹಳ್ಳಿಯಾಳ ಧಾರವಾಡ ಜಿಲ್ಲೆಗೆ ಕೂಡಬೇಕೆಂದು ಬಯಸುತ್ತಿದೆ. ಹಳ್ಳಿಯಾಳ ತಾಲೂಕಿನ ಪಶ್ಚಿಮ ಭಾಗದಲ್ಲಿ ಜನರು ಆಡುವ ಭಾಷೆ ಮರಾಠಿ ಭಾಷೆಯಲ್ಲ. ಅದು 'ಕುಳವಾಡಿ.' 'ಕುಳವಾಡಿ' ಕನ್ನಡ ಮರಾಠಿಗಳ ಸರಿಬೆರಿಕೆ. ಆದರೂ ಕನ್ನಡದಲ್ಲೇ ಅದರ ಉದ್ಧಾರದ ಮಾತು. ಸುಪಾ ಪೇಠಾದ ಮಾತೂ ಹಾಗೇ. ಅಲ್ಲಿಯ ಕೊಂಕಣಿ ಕನ್ನಡ ಮರಾಠಿಗಳ ಹಿತಮಿತ ಬೆರಿಕೆ. ಕಾರವಾರದ ಕಾಳೀ ನದಿಯ ಉತ್ತರಕ್ಕೆ ಕೆಲವು ಜನ ಕೊಂಕಣೀ ಮಾತನಾಡುವವರು ಇದ್ದಾರು. ಅವರಿಂದ ಮಾತ್ರವೇ ಕೊಂಕಣಿ ಜೀವ ಹಿಡಿದುಕೊಂಡಿದ್ದರೆ ಕೊನೆಯುವರೆಗೂ ಇವರನ್ನೇ ನಚ್ಚಿ, ನಂಬಿದ ನೆಲಕ್ಕೆ ಎರಡು ಬಗೆಯುವದು ಅದಕ್ಕೆ ಹೇಗೆ ಸಾಧ್ಯ?

ಮರಾಠಿಯ ಕನ್ನಡಕ ಹಾಕಿಕೊಂಡ ಮಾತ್ರಕ್ಕೆ ಮುಖದ ಶೋಭೆ ಹೆಚ್ಚಲಾರದು. ದೇವರು ಕೊಟ್ಟ ರೂಪವೇ ರೂಪ, ಅಂದವೇ ಅಂದ. ಅರ್ವಾಚೀನ ಅವರ್ಣನೀಯ ಸೌಂದರ್ಯವನ್ನು ಕೃತ್ರಿಮತೆಗೆ ಎಡೆಮಾಡಿ ಕೊಟ್ಟು ಬದುಕನ್ನು ಹಸಗೆಡಿಸುವದರಲ್ಲಿ ಅರ್ಥವಿಲ್ಲ. ಕಾರವಾರದ ನೆಲ ಕನ್ನಡದ ಭೂಮಿ, ಕಾರವಾರಿಗರ ಸಂಸ್ಕೃತಿ ಕನ್ನಡದ ಸಂಸ್ಕೃತಿ. ಇಡಿಯ ಕನ್ನಡ ನಾಡನ್ನು ತಿರುಗಿ, ಕನ್ನಡದ 'ಶ್ರೀ' ಕಾರವಾರದ ಕಡಲ ತೀರಕ್ಕೆ ಬಂದಾಗ ಅಲ್ಲಿಯೇ ಅವರು ಕನ್ನಡದ ತಾಯನ್ನು ಕಂಡರು. 'ನನ್ನ ಮನೆ ಹಾಳು. ನನ್ನ ನುಡಿ ಬೀಳು' ಎಂದು ಕನ್ನಡಿಗರ ದೇವಿ ಕಾರವಾರಿಗರನ್ನು ಅಣಕಿಸಿ ನುಡಿದು ಶ್ರೀಯವರ ಮುಂದೆ ಹೇಳಿದಾಗ 'ಏಕಮ್ಮ ಇನಿಸೊಂದು ಕೊರಗು? ಬೇಡಮ್ಮ ಮಕ್ಕಳಲಿ ಇನಿಸೊಂದು ಕಡು ಮುನಿಸು-ಬಾರಮ್ಮ ಹರಸು' ಎಂದು ಕವಿ ಕಾರವಾರಿಗರನ್ನು ಬೆನ್ನ ಹಿಂದೆ ಕಟ್ಟಿಕೊಂಡು ಕ್ಷಮೆ ಕೋರಿದರು. ಆಗ ನಕ್ಕಳಾ ತಾಯಿ.

ತಪ್ಪು ದಾರಿಯಲ್ಲಿ ಹೆಜ್ಜೆಯಿಕ್ಕುತ್ತಿದ್ದ ಕಾರವಾರಿಗರು ಅಲ್ಲಿಗೆ ಹಿಂದಕ್ಕೆ ಸರಿಯಬೇಕು. 'ಜೋಳದ ಪಾಳಿಯಂ' ನೆನೆದು ಕನ್ನಡವನ್ನು ನಂಬಿ ಮುಂದರಿಯಬೇಕು. ಕೊಂಕಣಿಗರು ಇನ್ನುಮೇಲಾದರೂ ತಮ್ಮ ಜನಸಾಮಾನ್ಯರ ಭಾಷೆ ಯಾವುದೆಂಬುದನ್ನು ಶ್ರದ್ಧೆಯಿಂದ ವಿಚಾರಿಸಿ, ಅದರೊಂದಿಗೆ ಬೆರೆತು ಕೊಂಡು ಆ ನಾಡಿನ ಶ್ರೇಯದಲ್ಲಿ ಭಾಗ ವಹಿಸುವದು ಕ್ಷೇಮವೆಂದು ನಮಗೆ ಅನ್ನಿಸುತ್ತದೆ.

---

## ಬಳ್ಳಾರಿಗರೂ ಆಂಧ್ರರೂ

ಇನ್ನೇನು? ಆಂಧ್ರಪ್ರಾಂತ ನಿರ್ಮಾಣವಾಗಿ ಬಿಡುತ್ತದೆ. ಇನ್ನುಳಿದ ಪ್ರಾಂತಗಳು ಹಾಳಾದರೂ ಹಾಳಾಗಲಿ. ಬಿಟ್ಟರೂ ಬಿಡಲಿ. ಆಂಧ್ರಪ್ರಾಂತವನ್ನು ನಾವು ಕಟ್ಟಿಕೊಂಡರೆ ಸಾಕು. ಅಂತ ಹುಚ್ಚು, ಅಂತ ಕನಸು ಆಂಧ್ರರಿಗೆ!

ಆಗಲಿ. ಯಾರು ಬೇಡವೆನ್ನುತ್ತಾರೆ. ಇಂದು ಆಂಧ್ರಪ್ರಾಂತವಾದರೆ ನಾಳೆ ಕರ್ನಾಟಕಪ್ರಾಂತ ನಿರ್ಮಾಣವೂ ಆದೀತು. ಆದರೆ ಒಂದು ಮಾತು. ಆಂಧ್ರಪ್ರಾಂತ ರಚನೆಯಿಂದ ಕನ್ನಡದ ನೆಲಕ್ಕೆ ವಂಚನೆ ಆಗದಿದ್ದರೆ ತೀರಿತು. ವಾದಗ್ರಸ್ತವಾದ ಭೂಮಿಯ ಮೇಲೆ ಬಲಪ್ರಯೋಗ ಮಾಡಿ ಯಾರೂ ಕೈ ಹಾಕದಿರಲಿ. ಅಂತಹ ನೆಲದ ಜನ ಹೇಗೆ ಹೇಳುತ್ತಾರೊ, ಯಾವ ಪ್ರಾಂತ ಸೇರಲು ಒಪ್ಪುತ್ತಾರೊ ಹಾಗೆ ನಡೆಯುವುದು ಕ್ಷೇಮ ಅಂತ ಅಭಿಪ್ರಾಯ, ಅಂತ ಆಶಯ ಕನ್ನಡಿಗರದು.

ಆಂಧ್ರರು ಕೇಳಲೇ ಇಲ್ಲ. ತಮ್ಮಷ್ಟಕ್ಕೆ ತಾವೇ ಗಡಿನಿರ್ಣಯ ಸಮಿತಿಯನ್ನು ನಿರ್ಮಿಸಿಕೊಂಡರು. ೫೦ ನೆಯ ಸಾಲಿನ ಜನೆವರಿ ತಿಂಗಳ ಪ್ರಾರಂಭದಲ್ಲಿ ಮದರಾಸು ಸರಕಾರದ ಇಬ್ಬರು ಮಾನ್ಯ ಮಂತ್ರಿಗಳು ಶ್ರೀ ಗೋಪಾಲರೆಡ್ಡಿ ಮತ್ತು ಭಕ್ತವತ್ಸಲಂ ಆಂಧ್ರ ದೇಶದ ಹಿತವನ್ನೇ ನಂಬಿ ಬಳ್ಳಾರಿ ಜಿಲ್ಲೆಯಲ್ಲಿಯ ವಾದಗ್ರಸ್ತ ಭೂಮಿಯಲ್ಲಿ ಸಂಚಾರವನ್ನು ಕೈಕೊಂಡರು. ಬಳ್ಳಾರಿಯ ಜನತೆ ಏನು ಹೇಳುತ್ತಾರೆಂಬುದು ಮೊದಲೇ ಅವರಿಗೆ ತಿಳಿದಿದ್ದಿತು. ಬಳ್ಳಾರಿ ಜಿಲ್ಲೆಯ ರಾಯದುರ್ಗ, ಆಲೂರು ಆದವಾನಿ ತಾಲೂಕಗಳ ಕನ್ನಡದ ನಿಷ್ಠೆಯ ಅರಿವು ಅವರಿಗಿದ್ದಿತು. ಅದರೂ ಮಾನ್ಯ ಮಂತ್ರಿಗಳು ಸಂದರ್ಶನದ ಆಟವನ್ನು ಹೂಡಿದರು.

೧೯೧೬ ರಂದು ನಡೆದ ವಿಷಯ. ಅಗ ಮೊಸ್ಕಡಿನ ಎಂಬವರು ಬಳ್ಳಾರಿ ಜಿಲ್ಲೆಯ ಕಲೆಕ್ಟರರಾಗಿದ್ದರು. ಆಂಧ್ರರ ಬಲಪ್ರಯೋಗ ಬಳ್ಳಾರಿಯ ಮೇಲೆ ಪ್ರಾರಂಭವಾಗಿದ್ದಿತು. ತೆಲುಗು ಅಧಿಕಾರಿಗಳು ತುಂಬ ತೊಡಗಿದ್ದರು. ಕನ್ನಡಿಗರಿಗೆ ಅನ್ಯಾಯವಾಗುತ್ತಲಿದ್ದಿತು. ಕೊರ್ಟು ಕಚೇರಿಗಳಲ್ಲಿಯೂ, ಶಿಕ್ಷಣ ಸಂಸ್ಥೆಗಳಲ್ಲಿಯೂ ತೆಲುಗು ಭಾಷೆಯನ್ನು ಒತ್ತಾಯ

ದಿಂದ ಹೇರುವ ಸಂದರ್ಭ ಆ ಕಾಲಕ್ಕೆ ನಡೆದಾಗ ಬಳ್ಳಾರಿಗೆ ಬಳ್ಳಾರಿಯೇ ಸಿಡಿದೆದ್ದು ನಿಂತಿತು. ಸರಕಾರಕ್ಕೆ ದೂರು ಹೋಯಿತು. ಅಷ್ಟಾದ ಮೇಲೆ ಬಳ್ಳಾರಿ ಜಿಲ್ಲೆ ಕನ್ನಡ ಮತ್ತು ತೆಲುಗು ಭಾಷೆಯ ಸಮ್ಮಿಶ್ರ ಪ್ರದೇಶವೆಂದು ಸಾರಿದರು.

ಹಾಗೆ ಸಾರಿದ ಮೇಲೂ ಒಳಗಿಂದೊಳಗೆ ಜ್ವಾಲೆ ಪ್ರಜ್ವಲಿಸುತ್ತಲೇ ಇದ್ದಿತು. ಆಂಧ್ರ ಮತ್ತು ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಸಮಿತಿಗಳು ಕೇಳ್ಕರ್ ಅವಾರ್ಡನ್ನು ಮುಂದೆ ಮಾಡಿ ನ್ಯಾಯ ದಾನ ಬೇಡಿದವು. ಕೇಳ್ಕರ್ ಅವಾರ್ಡು ನಿರ್ಣಯ ಕೊಟ್ಟಿತು. ಬಳ್ಳಾರಿ ಜಿಲ್ಲೆಯ ಒಂಬತ್ತು ತಾಲೂಕು ಕರ್ನಾಟಕಕ್ಕೆ ಸೇರಬೇಕು, ಇನ್ನು ಮೂರು ತಾಲೂಕುಗಳಾದ ರಾಯದುರ್ಗ, ಆಲೂರು ಮತ್ತು ಆದವಾನಿಗಳು ಆಂದ್ರಕ್ಕೆ ಸೇರಬೇಕು. ಆದರೆ ಭಾಷಾವಾರ ಪ್ರಾಂತ ರಚನೆಯ ಕಾಲ ಬಂದಾಗ ಈ ಮೂರು ತಾಲೂಕಗಳ ಪ್ರಶ್ನೆಯನ್ನು ಜನಾಭಿಪ್ರಾಯಕ್ಕೆ ಹಾಕಿ ನಿರ್ಧರಿಸಬೇಕೆಂದು ಕೇಳ್ಕರ್ ಅವಾರ್ಡು ಕೇಳಿತು.

೧೯೩೭ ರಲ್ಲಿ ಶಾಸನ ಸಭೆಯಲ್ಲಿ ಆಂಧ್ರ ವಿಶ್ವವಿದ್ಯಾನಿಲಯಕ್ಕೆ ಬಳ್ಳಾರಿ ಜಿಲ್ಲೆಯನ್ನು ಕೂಡಿಸುವ ಮಾತು ಬಂದಾಗ ಬಳ್ಳಾರಿ ಪ್ರಬಲವಾಗಿ ಪ್ರತಿಭಟಿಸಿ ಮದರಾಸನ್ನು ಸೇರುವ ಒಪ್ಪಿಗೆಯನ್ನಿತ್ತಿತು. ಬಳ್ಳಾರಿಯ ಜಿಲ್ಲೆಯ ಮೂರೂ ತಾಲೂಕುಗಳು ಕೇಳ್ಕರ್ ಅವಾರ್ಡಿನ ನಿರ್ಣಯದ ನಂತರವೂ ಸುಮ್ಮನಿರದೆ ಕಾಲಕಾಲಕ್ಕೆ ಕನ್ನಡದ ಮೇಲಿರುವ ತಮ್ಮ ಅಪಾರವಾದ ಶ್ರದ್ಧೆ ನಂಬುಗೆಗಳನ್ನು ವ್ಯಕ್ತಪಡಿಸುತ್ತಲೇ ಬಂದಿವೆ.

ಆದರೆ ಈಗಲಾದರೂ ಆಂಧ್ರಕ್ಕೆ ಆ ತಾಲೂಕುಗಳ ಕನ್ನಡದ ನಿಷ್ಠೆಯನ್ನು ಕಂಡರೆ ಆಗದು. ಬಳ್ಳಾರಿ ಜಿಲ್ಲೆಯ ಈ ಪ್ರದೇಶ ಆಂಧ್ರಕ್ಕೆ ಬಂದರೆ ತಮಗೆ ಎಷ್ಟೋ ಅನುಕೂಲವೆಂದು ಅವರ ಆಸೆ. ಆಂಧ್ರ ಪ್ರಾಂತ ಆರೂವರೆ ಕೋಟಿಯ ಸಾಲದ ಪ್ರಾಂತವಾಗುತ್ತದೆ. ಸಾಲದ್ದಕ್ಕೆ ತುಂಗಭದ್ರಾ ನೀರಿನಲ್ಲಿ ಮುಳುಗುವ ಜಮೀನಿಗೆ ಎಂಟು ಕೋಟಿ ಪರಿಹಾರ ಕೊಡಬೇಕು. ಆಂಧ್ರ ಎಲ್ಲಿಂದ ಇಷ್ಟು ಹಣ ತರುತ್ತದೆ. ವಿವಾದಾಸ್ಪದವಾದ ಪ್ರದೇಶವನ್ನು ಹಾಗೆಯೆ ಬಿಟ್ಟು ಪ್ರಾಂತ ರಚನೆಗೆ ಕೈಹಾಕಬೇಕೆಂದು ತ್ರಿಮೂರ್ತಿಗಳ ನಿರ್ಣಯವೇನೋ ಇದೆ. ಮೇಲೆ ಆ ತಾಲೂಕುಗಳ, ಆ ತಾಲೂಕಿನ ಸುತ್ತ ಮುತ್ತಣ ಜನತೆಯೂ ಆಂಧ್ರಕ್ಕೆ ಸೇರಲು ನಿರಾಕರಿಸುತ್ತಿದೆ. ಇದನ್ನೆಲ್ಲ

ಕೇಳುತ್ತ ಕುಳಿತರೆ ಆಂಧ್ರ ಪ್ರಾಂತದ ಗತಿಯೇನು? ಈ ವಿಷಯದ ಮೇಲೆ ಜನಾಭಿಪ್ರಾಯವನ್ನು ಸಂಗ್ರಹಿಸುವ ನಟನೆ ಮಾಡುತ್ತ ಮದರಾಸಿನ ಮಂತ್ರಿಗಳು ಅಂದು ಬಳ್ಳಾರಿಯ ಜಿಲ್ಲೆಯ ಸಂಚಾರವನ್ನು ಕೈಕೊಂಡಂದು ಏನು ನಡೆಯಿತು?

ಗುಂಟಕಲ್ಲಿನ ರೈಲು ಇಳಿದು ಬಳ್ಳಾರಿಯ ರಸ್ತೆಯಲ್ಲಿ ಮಂತ್ರಿಗಳ ಕಾರು ಓಡುತ್ತಲಿದ್ದಿತು. ಬಳ್ಳಾರಿಯ ತಾಲೂಕಿನ ಹಳ್ಳಿಗಳಾದ ಪರಮದೇವನ ಹಳ್ಳಿ, ಚೊಳ್ಳಗುರಿಕಿ, ಸಿಡಿಗಿನ ಮಳೆ, ಜೋಳದರಾಸಿ, ಕಕ್ಕಬೇವಿನ ಹಳ್ಳಿ, ಬೇವಿನ ಹಳ್ಳಿ, ಬಿಸಿಲಹಳ್ಳಿಗಳನ್ನು ಮಂತ್ರಿಗಳ ಕಾರು ದಾಟುತ್ತಿರುವಾಗ ಕಂಡ ದೃಶ್ಯವನ್ನು ಅವರೆಂದಿಗೂ ಮರೆಯಲಾರರು.

'ಬಳ್ಳಾರಿ ಜಿಲ್ಲೆಯ ವಿಭಜನೆ ಆಗ ಕೂಡದು' 'ಕನ್ನಡಿಗರು ನೆಲಗಳ್ಳರಲ್ಲ" "ಬಳ್ಳಾರಿ ನುಂಗಿದರೆ ಕುಡಗೋಲು ನುಂಗಿದಂತೆ" ಬಳ್ಳಾರಿ ಜಿಲ್ಲಾ ಕರ್ನಾಟಕ" "ಆಂಧ್ರದಲ್ಲಿ ಸೇರಲು ನಿರಾಕರಿಸುತ್ತೇವೆ?" ಆ ಜಯಘೋಷಗಳಿಂದ ಹಳ್ಳಿಗಳು ಪ್ರತಿಧ್ವನಿಸುತ್ತಿದ್ದವು. ಮಂತ್ರಿಗಳು ಅವಾಕ್ಕಾದರು

ಬಳ್ಳಾರಿಯಿಂದ ಹದಿನಾರು ಮೈಲುಗಳ ಆಚೆಗೆ ಪೂರ್ವಕ್ಕೆ ಚೊಳ್ಳಗುರಿಕೆ ಹಳ್ಳಿ. ಬಳ್ಳಾರಿಗೂ ಅದಕ್ಕೂ ಬಹಳಅಂತರ. ಆದರೂ ಚೊಳ್ಳಗುರಿಕೆ ಆಂಧ್ರಕ್ಕೆ ಸೇರ ಬಯಸದೆ ಮದ್ರಾಸಕ್ಕೆ ಸೇರಬೇಕೆಂಬ ಹಟವೇನು? ಮಾನ್ಯ ಮಂತ್ರಿಗಳು ಕಾರಿನಿಂದ ಇಳಿದು ಆಂಧ್ರಪ್ರಾಂತವನ್ನು ಸೇರಲು ನಿರಾಕರಿಸುತ್ತ ಜಯಘೋಷ ಮಾಡುತ್ತಿದ್ದ ಹಳ್ಳಿಗನೋರ್ವನನ್ನು ಪ್ರಶ್ನಿಸಿದಾಗ "ಪೂರ್ವ ಪಶ್ಚಿಮ ಪಾಕಿಸ್ಥಾನಗಳು ಆಡಳಿತವನ್ನು ನಡಿಸುತ್ತಿಲ್ಲವೇ? ಎಂಬ ಉತ್ತರ ಬಂದಿತು. ಮಂತ್ರಿಗಳು ಆ ಉತ್ತರ ಕೇಳಿ ತಡಮಾಡಲಿಲ್ಲ, ಕಾರನ್ನು ಏರಿದರು.

ಬೇವಿನ ಹಳ್ಳಿ, ಬಿಸಿಲಹಳ್ಳಿಯಲ್ಲಿಯ ಕೆಲವು ಆಂಧ್ರ ದೇಶಾಭಿಮಾನಿಗಳು ತಾವು ಆಂಧ್ರಕ್ಕೇ ಸೇರುತ್ತೇವೆಂದು ಮಂತ್ರಿಗಳಿಗೆ ಬಿನ್ನವತ್ತಳೆಯನ್ನರ್ಪಿಸಿದರು. ಮಂತ್ರಿಗಳು ಬಿನ್ನವತ್ತಳೆಯನ್ನರ್ಪಿಸಿದವರಿಗೆ "ನಿಮ್ಮ ಮಾತೃಭಾಷೆ ಯಾವದು?" ಎಂದು ಕೇಳಲು "ಮನೆಯಲ್ಲಿ ತೆಲಗು ಮಾತನಾಡುತ್ತೇವೆ" ಎಂದು ಕನ್ನಡದಲ್ಲಿ ಅವರು ಉತ್ತರ ಕೊಟ್ಟಾಗ ಭಕ್ತವತ್ಸಲಂ, ಗೋಪಾಳ ರೆಡ್ಡಿಯವರಿಗೆ ನಗೆ ಬರದೆ ಇರಲಿಲ್ಲ. ಆಂಧ್ರದ ಸಾಹುಕಾರರ ಅಜ್ಞೆಗೆ ಸಿಲುಕಿದ ಈ ಹಳ್ಳಿಗರು ವಂಚನೆಗೀಡಾಗಿದ್ದಾರೆ ಎಂದು ಅವರು ನಂಬಿದರು.

"ಆಂಧ್ರರು ನಿಮಗೇನಾದರೂ ಅನ್ಯಾಯ ಮಾಡಿದ್ದಾರೆಯೆ?" ಇಲ್ಲವೆ ತಮಿಳರು ಏನಾದರೂ ಉಪಕಾರ ಮಾಡಿದ್ದಾರೆಯೆ?" ಎಂದು ಮಂತ್ರಿಗಳು ಹಳ್ಳಿಗರಿಗೆ ಪ್ರಶ್ನೆ ಹಾಕಿದಾಗ "ಆಂಧ್ರರ ಕೈಯಲ್ಲಿ ಸಾಕಷ್ಟು ಬಿಸಿಲು ಹಣ್ಣು ತಿಂದಿದ್ದೇವೆ. ಆದರೆ ತಮಿಳರು ಕೆಡುಕನ್ನು ಮಾಡಿಲ್ಲ. ಮಾತ್ರವಲ್ಲ, ಅವರು ಆಂಧ್ರರಷ್ಟು ಕೇಡನ್ನುಂಟುಮಾಡಲಾರರು."

ಮಂತ್ರಿಗಳಿಗೆ ಅರ್ಥವಾಯಿತು. ಅವರು ಪುನಃ ಆ ದಾರಿಯಲ್ಲಿ ಯಾರನ್ನೂ ಪ್ರಶ್ನಿಸಲಿಲ್ಲ. ಬಳ್ಳಾರಿಗೆ ಬಂದು ಪ್ರವಾಸಿಕರ ಬಂಗಲೆಯಲ್ಲಿಳಿದಾಗ ಇಡಿಯ ಬಳ್ಳಾರಿಯೇ ಅಲ್ಲಿ ನಿಂತು ಕನ್ನಡ ಜಯಜಯಕಾರವನ್ನು ಮಾಡುತ್ತಲಿದ್ದಿತು. ಅಂದು ಬಳ್ಳಾರಿಯಲ್ಲಿ ಮಂತ್ರಿಗಳಿಗೆ ಲೆಕ್ಕವಿಲ್ಲದಷ್ಟು ಸಂಘ ಸಂಸ್ಥೆಗಳು ಸಾಕ್ಷೀ ಹೇಳಿದವು.

ರಾಮದುರ್ಗ, ಆದವಾನಿ, ಆಲೂರು ತಾಲೂಕುಗಳು ಶುದ್ಧ ಕನ್ನಡದ ಪ್ರದೇಶಗಳು. ಆಂಧ್ರ ಈ ಪ್ರದೇಶವನ್ನು ನುಂಗಿತೇ, ಅದು ಕುಡಗೋಲನ್ನು ನುಂಗಿದಂತಾದಿತು, ಎಚ್ಚರ!

ಮಂತ್ರಿಗಳು ಬಹಳ ಎಚ್ಚರಿಕೆಯಿಂದಲೇ ಅವರ ಮಾತನ್ನು ಕೇಳಿಕೊಂಡು "ಸರಕಾರಕ್ಕೆ ನಿಮ್ಮ ಅಭಿಪ್ರಾಯ ಹೇಳುತ್ತೇವೆ" ಎಂದು ಬಂದ ದಾರಿಯಿಂದ ಹಿಂತಿರುಗಿ ಹೋದರು!

"ಕನ್ನಡಿಗರ ಪ್ರತಿಪಾದನೆ ಯಥಾರ್ಥವಿದೆ. ಕರ್ನಾಟಕ ಪ್ರಾಂತ ರಚನೆಯಾಗುವವರೆಗೆ ಬಳ್ಳಾರಿ ಕನ್ನಡಿಗರು ಮದರಾಸದಲ್ಲುಳಿಯಬಹುದು" ಎಂದು ಆ ಮೇಲೆ ಆಂಧ್ರ ಪ್ರಾಂತದ ಜನಕ ಡಾ. ಪಟ್ಟಾಭಿ ಪ್ರಕಟನೆ ಹೊರಡಿಸಿದರು.

ಆ ಪ್ರಕಟನೆ ನೋಡಿ ಕಾರವಾರದ ಕೊಂಕಣಿಗರು ಕಣ್ಣು ಬಿಟ್ಟರು. ಆಂಧ್ರದೇಶ ತಲೆವಾಗಿತು. ತಿಳಿಗನ್ನಡದ ಕಾಸಾರದಲ್ಲಿ ಕಲ್ಲು ಒಗೆದು ಶಾಂತಿಯನ್ನು ಕದಲಿಸಬಯಸುವವರು ಎಂದಿಗೂ ಕನ್ನಡದ ಮನಸ್ಸನ್ನು ಗೆಲ್ಲಲಾರರು. ಕನ್ನಡ ಕನ್ನಡವೇ; ಎಂದೆಂದಿಗೂ ಕನ್ನಡವೇ ಎಂಬ ಮಾತನ್ನು ಅಂತೂ ಕೊಂಕಣಿಗರಂತೆ ಆಂಧ್ರರೂ ಸಕಾಲಕ್ಕೆ ಅರಿಯುವಂತಾದುದು ಬಹಳ ಸಮಾಧಾನದ ಸಂಗತಿ!

---

# ಕರ್ನಾಟಕ ಮಂತ್ರದೀಕ್ಷೆ!

ಮೈಸೂರಿಗೆ ಹೋದವರು ಎರಡು ವಸ್ತುಗಳನ್ನು ನೋಡದೆ ಹಿಂದಿರುಗಲಾರರು. ಒಂದು ಬೃಂದಾವನ, ಇನ್ನೊಂದು ಒಂಟಿಕೊಪ್ಪಲಿನ 'ಉದಯರವಿ.' ಬೃಂದಾವನ ವಿಜ್ಞಾನಿ ಕಂಡ ಸತ್ಯ; 'ಉದಯರವಿ' ಕವಿಕಂಡ ಸತ್ಯ. ನಾಡು ನುಡಿ ಕಟ್ಟುವ ಕಾರ್ಯ ಅವರಿಬ್ಬರಿಗಿರುವ ಹಿರಿಮೆ. ಅಪಾರ ಅನಂತ. ನೆಲ ಚಿನ್ನವಾಗಬೇಕೆಂದು ಒಬ್ಬನ ಹಂಬಲ. ಮನ ಮಂದಾರ ಲೋಕವಾಗಬೇಕೆಂದು ಇನ್ನೊಬ್ಬನ ತಪಸ್ಸು. ಮೈ ಮೇಲೆ ಹುತ್ತ ಬೆಳೆಯುವಂತೆ ಇಬ್ಬರೂ ನಡೆಸಿದ ತಪಸ್ಸೇ ಇಂದಿನ ಕರ್ನಾಟಕದ ಬದುಕು, ಭಾಗ್ಯ. ಅವರ ಕಾರ್ಯದಲ್ಲಿ ಅಡ್ಡಿ ಬಂದವರು ತಲೆಯೆತ್ತಿ ಪುನಃ ಅಡ್ಡಾಡಿದ ನೆನಪು ಯಾರಿಗೂ ಇಲ್ಲ. ಅಷ್ಟು ಅಭಿಮಾನಿಗಳು, ಅಷ್ಟು ಅತ್ಯುಗ್ರರು, ಅಷ್ಟು ಗುಣಿಗಳು ಅವರು. ಆಂತಲೇ ವಿಶ್ವೇಶ್ವರಯ್ಯ ಕುವೆಂಪು ಕನ್ನಡದ ಗೆಲವಿನ ಕಿರೀಟವಾಗಿದ್ದಾರೆ, ಸಂಸ್ಕೃತಿಯ ಸಾಕಾರ ರೂಪು ಆಗಿದ್ದಾರೆ. ಕನ್ನಡದ ಜನತೆ ಎಂದಿಗೂ ಅವರನ್ನು ಮರೆಯಲಾರದು.

ಕುವೆಂಪು ಆಧುನಿಕ ಕನ್ನಡ ಸಾಹಿತ್ಯ ಸಾಮ್ರಾಜ್ಯದ ಅನಭಿಷಕ್ತ ಕವಿ ಸಮ್ರಾಟ. ಅಭಿಮಾನದ ಮಾತು ಅಲ್ಲ ಅದು; ಕಂಡ ಸತ್ಯ. ಕನ್ನಡದ ಬದುಕು ಪ್ರಗತಿಪಥದಲ್ಲಿ ಸೋತು ನಿಂತಂದು ಕುವೆಂಪು ನಾಡಿಗೆ ದಾರಿಯನ್ನು ತೋರಿದ್ದಾರೆ. ನಿರಾಶೆಯ ನಿಟ್ಟುಸಿರಿನಿಂದ ಬಾಳು ಮುಗ್ಗರಿಸುತ್ತಿರುವಾಗ 'ಪಾಂಚಜನ್ಯ' ಊದಿ ಆಸೆಯ ಅಮೃತ ಮಂತ್ರವನ್ನು ತುಂಬಿ ಉತ್ತೇಜನಗೊಳಿಸಿದ್ದಾರೆ. ಸಾಹಿತ್ಯ ರಂಗದಲ್ಲಿ ತಾಮಸವೃತ್ತಿ ತಲೆದೋರಿದಾಗ, ರಾಜಕೀಯರಂಗದಲ್ಲಿ ಶಕುನಿಯ ಕುತಂತ್ರ ತಾಂಡವವಾಡುತ್ತಿದ್ದಾಗ ಒಂಟಿಕೊಪ್ಪದಲ್ಲಿರುವ "ಉದಯರವಿ"ಯಲ್ಲಿ ಕುಳಿತು ಕುವೆಂಪು ಕಾವ್ಯದ ವೀಣೆಯನ್ನು ಮಿಡಿದು ಜನತೆಯನ್ನು ಸತ್ಯದ ಪಥದಲ್ಲಿ ಕರೆದೊಯ್ದಿದ್ದಾರೆ. ಅವರ ಲೇಖನಿ ಬೊಮ್ಮನಹಳ್ಳಿಯ ಕಿಂದರಿ ಜೋಗಿಯ ಕಿನ್ನರಿಯಂತೆ

ಕುರುಕ್ಷೇತ್ರದ ಕಾಳಗದಲ್ಲಿ ಮೊಳಗಿದ ಕೃಷ್ಣನ ಪಾಂಚಜನ್ಯ. ಅವುಗಳ ಇದಿರು ಅಸತ್ಯ ತಲೆ ತಗ್ಗಿಸಿಕೊಂಡು ಬರದೆ ಗತಿಯೇ ಇಲ್ಲ.

ಹಿಂದಕ್ಕೊಮ್ಮೆ ಕನ್ನಡದ ಕೂಸಿನ ಕೈಯಲ್ಲಿದ್ದ ರೊಟ್ಟಿಯ ಆಸೆಗಾಗಿ 'ಹಿಂದೀ' ಹದ್ದು ಎರಗಿ ಬಂದಾಗ ಕುವೆಂಪು ಸಮಯಕ್ಕೆ ಸರಿಯಾಗಿ ಅಂಗಳಕ್ಕಿಳಿದು ಕುಣೆಗಲ್ಲನ್ನು ಬೀಸದಿದ್ದರೆ ನಮ್ಮ ನುಡಿ ಆಕ್ರಮಣಕ್ಕೆ ತುತ್ತಾಗುತ್ತಲಿದ್ದಿತು. "ಸಾಯುತಿದೆ ನಿಮ್ಮ ನುಡಿ ಓ, ಕನ್ನಡದ ಕಂದರಿರಾ" ಎಂದು ಹಾಡಿ ಮೈ ಮರೆತು ಮಲಗಿದ್ದ ಜನವನ್ನು ಎಬ್ಬಿಸಿ "ಉತ್ತರದ ಕಾಶಿಯಲಿ ಕತ್ತೆ ಮಿಂದೈತರಲು ದಕ್ಷಿಣದ ದೇಶಕದು ಕುದುರೆಯಹುದೆ?" ಎಂದು ಮೂದಲಿಸಿ ನುಡಿಯದಿದ್ದರೆ ಕನ್ನಡ ನಾಡಿನ ರಾಜಕೀಯ ದಲ್ಲಾಳಿ, ಕಾಕಾ ಕಾಲೇಲಕರರಿಗೆ ಕನ್ನಡವನ್ನು ಎಂದೋ ಮಾರಿ ಬಿಡುತ್ತಿದ್ದನು. ಅ. ನ. ಕೃಷ್ಣರಾಯರ ಸಾರಥ್ಯ, ಪುಟ್ಟಪ್ಪನವರ ಪಾಂಚಜನ್ಯ ಬೆಂಬತ್ತಿ ಬಂದಿದ್ದ ಹಿಂದೀ ಪ್ರಚಾರ ಕಾರ್ಯವನ್ನು ಹಿಂದಕ್ಕಿರಿಸಿ ಕನ್ನಡದ ಏಳ್ಗೆಯನ್ನು ಕಾಪಾಡಿದವು. ಕನ್ನಡದ ಓದು ಬರಹವನ್ನು ಇನ್ನೂ ಸಾಧಿಸದ ಮಗುವಿಗೆ ಹಿಂದೀ ಅಂಕಲಿಪಿಯೇ ? ಈ ನಾಡಿನ ಶೋಷಣೆ ಉತ್ತರದವರ ಹೊಟ್ಟೆಯನ್ನು ಕೊಬ್ಬಿಸಬೇಕೆ ? ಕುವೆಂಪುಗೆ, ಅ. ನ. ಕೃ. ರವರಿಗೆ ನಮಸ್ಕಾರ! ನಮ್ಮ ನಾಡಿನ ರೈತನ ಮಗು ಅವರ ಹೆಸರು ಹೇಳಿ ಕನ್ನಡದ ಅಂಕಲಿಪಿಯನ್ನು ಪ್ರಾರಂಭಿಸುವಲ್ಲಿ ಸಂಶಯವೇನು ?

ಏಕೀಕೃತ ಕರ್ನಾಟಕದ ಹೋರಾಟದ ಕಾಲ ಹತ್ತಿರ ಹತ್ತಿರ ಬಂದಿತು. ರಾಜಕಾರಣಿಗಳು ಮೂಗುದಾರ ಬಿಚ್ಚಿದ ಮೂಡಲ ಹೋರಿಯಂತೆ ಮನ ಬಂದಹಾಗೆ ನಾಡಿನಲ್ಲಿ ತೊತ್ತೆಳದುಳಿಯುವ ಸಮಯ ಸನ್ನಿಹಿತವಾಯಿತು. ಮೌನದಿಂದ ನಾಡುನುಡಿಯ ಆರಾಧನಾ ಕಾರ್ಯದಲ್ಲಿ ನಿರತರಾದ ಪುಣ್ಯವಂತರು ಎಲ್ಲೋ ಉಳಿದರು. ಕಾಡುಮಲ್ಲಿಗೆಯ ತೆರದಲ್ಲಿ ಸದ್ದಿಲ್ಲದೆ ಅರಳಿ ಸುತ್ತೆಲ್ಲ ಪರಿಮಳ ಬೀರುತ್ತ ಜಗದ ಹಿಗ್ಗಿಗೆ ಬಾಯಿ ಬಿಡದೆ ಇಡಿಯ ಬದುಕನ್ನೇ ಸೇವೆಗೆಂದು ಮೀಸಲಿರಿಸಿದ ತಪೋಧನರು ಎಲ್ಲೋ ಉಳಿದರು. ಹೂಬಳ್ಳಿ ಮೈ ಸುತ್ತಿ ಹುತ್ತು ದೇಹವನ್ನಾಕ್ರಮಿಸಿದರೂ ಅತ್ತಿತ್ತ ಕತ್ತೆತ್ತಿ ನೋಡಲೂ ಸಹ ಪುರಸತ್ತಿಲ್ಲದಂತೆ ಕನ್ನಡದ ಹಿತ ಚಿಂತನೆಯಲ್ಲಿ ನಿರತರಾದ ಕಾವ್ಯರ್ಷಿಗಳು ಎಲ್ಲೋ ಉಳಿದರು. ನಾಲ್ಕು ಬಣವಿಗೆ ಬೆಂಕಿ ಹಚ್ಚಿ,

ನಾಲ್ಕು ಗುಡಿ ಗುಂಪಾರ ಸುಟ್ಟು ನಾಡಿನ ನಾಯಕರೆಂದು ಮೆರೆಯುತ್ತ ಸ್ವಪ್ರತಿಷ್ಠೆಯಲ್ಲಿ ತೊಡಗಿದ ರಾಜಕಾರಣಿಗಳು ತಾವೇ ತಾವಾಗಿ ಅಧಿಕಾರ ನಡೆಸುವ ಹೊತ್ತು ಬಂದಿತು. ಎರಡು ಕೋಟಿ ಕನ್ನಡ ಜನರ ಬದುಕಿನ ಸೂತ್ರ ಇವರ ಕೈಯಲ್ಲಿಯೇ! ಇವರು ಮನಸ್ಸು ಮಾಡಿದರೆ ಕನ್ನಡ ಉದ್ಧಾರವಾಗಬೇಕು! ಇಲ್ಲವಾದರೆ ಇಲ್ಲ!

ನಮ್ಮ ನಾಡಿನ ದೌರ್ಭಾಗ್ಯ! ರಾಜಕಾರಣದ ಗಾಳಿ ನಾಡಿನ ಸಾಂಸ್ಕೃತಿಕ ಸಂಸ್ಥೆಗಳ ಮೇಲೆಯೂ ಬೀಸಿತು. ಕನ್ನಡ ಶಾರದೆಯ ತಪೋ ಭೂಮಿಯಾದ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷನ್ಮಂದಿರದ ಮೇಲೂ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಮೇಲೂ ಈ ಗಾಳಿ ಬೀಸದೆ ಇರಲಿಲ್ಲ. ಸಾಹಿತ್ಯ ಪರಿಷನ್ಮಂದಿರದಲ್ಲಿ ಎಂತ ಹಿರಿಯರು ಕಾಲಿರಿಸಿ ಹೋದವರು, ಎಂತಹರು ಬಂದಿದ್ದಾರೆ? ವಿದ್ಯಾವರ್ಧಕ ಸಂಸ್ಥೆಯನ್ನು ಅಂದು ಕಟ್ಟಿದವರು ಎಂತಹರು, ಇಂದು ಅದನ್ನು ನಡಸುತ್ತಿರುವವರು ಎಂತಹರು? ಕೊಲ್ಲಾಪುರದ ಸಾಹಿತ್ಯ ಸಮ್ಮೇಲನವನ್ನು ಕಂಡವರು, ವಿದ್ಯಾವರ್ಧಕ ಸಂಘದ ವಜ್ರಮಹೋತ್ಸವ ಸಂಘದ ನಾಲ್ಕು ಗೋಡೆಗಳ ಮಧ್ಯದಲ್ಲಿಯೇ ಯಾರಿಗೂ ಗೊತ್ತಾಗದಂತೆ ನಡೆದು ಹೋದುದನ್ನು ನೋಡಿದವರು ನಾಡಿನ ಈ ಹಿರಿಯ ಸಾಂಸ್ಕೃತಿಕ ಸಂಸ್ಥೆಗಳಿಗೆ ಹಿಡಿದ ಕ್ಷಯರೋಗವನ್ನು ಕಂಡು ಮರುಗದೆ ಇದ್ದಿರಲಾರರು. ಒಂದರಲ್ಲಿ ರಾಜಕೀಯ ಪ್ರವೇಶ, ಇನ್ನೊಂದರಲ್ಲಿ ಹಿಂಬಿನಿವಾರರ ಪ್ರವೇಶ. ನಾಡಿಗೆ ದಾರಿಯನ್ನು ತೋರಿಸುವ ಸಂಸ್ಥೆಗಳೇ ಹೀಗಾದ ಮೇಲೆ, ಬೇಲಿಯೆ ಎದ್ದು ಹೊಲ ಮೇಯತೊಡಗಿದ ಮೇಲೆ ಇನ್ನೇನು ಮಾಡುವದಿದೆ?

ಕುವೆಂಪು ತಪಸ್ಸಿನ ಗುಹೆಯಿಂದ ಹೊರಗೆ ಬಂದು ಕನ್ನಡ ನಾಡಿನೆಡೆಗೆ ನೋಡಿದರು. ರಾಜಕೀಯ ನಾಟಕ ನಾಡಿನಲ್ಲಿ ನಡೆದು ಬಿಟ್ಟಿದೆ. ಮೈಸೂರಿನಲ್ಲಿ ರೆಡ್ಡಿ ಮಂತ್ರಿ ಮಂಡಳ, ಮುಂಬೈಯಲ್ಲಿ ಖೇರರ ಮಂತ್ರಿ ಮಂಡಲ, ಕೇಂದ್ರದಲ್ಲಿ ಭಾಷಾವಾರ ಪ್ರಾಂತ ರಚನೆಯ ವಿರೋಧಿಗಳು— ಕುವೆಂಪು ಆಗ ಮಿಡಿದ ವೀಣೆ ನರಿಗಳನ್ನು ಕಲಕಿಸಿತು, ಗುಡ್ಡ ಬೆಟ್ಟಗಳನ್ನು ಅಲುಗಾಡಿಸಿತು, ಜನಮನವನ್ನು ತಾಕಲಾಡಿಸಿತು!

ಅಖಂಡ ಕರ್ಣಾಟಕ
ಅಲ್ತೊ ನಮ್ಮ ಬೂಟಾಟದ ರಾಜಕೀಯ ನಾಟಕ!
ಇಂದು ಬಂದು ನಾಳೆ ಸಂದು
ಹೋಹ ಸಚಿವ ಮಂಡಲ
ರಚಿಸುವಂದು ಕೃತಕವಲ್ತೊ
ಸಿರಿಗನ್ನಡ ಸರಸ್ವತಿಯ
ವಜ್ರಕರ್ಣ ಕುಂಡಲ!
ಅಖಂಡ ಕರ್ನಾಟಕ

ಅಲ್ತೋ ನಮ್ಮ ನಾಲ್ಕು ದಿನದ ರಾಜಕೀಯ ನಾಟಕ! ಕವಿ ಈ ಮಾತನ್ನು ಹೇಳಿದಾಗ ಮೈಸೂರಿನ ವಿದ್ಯಾ ಖಾತೆಯಿಂದ ಅವರಿಗೆ 'ಎಚ್ಚರಿಕೆ' ಹೋಯಿತೆಂದೂ, ಕುವೆಂಪು ಆ ಎಚ್ಚರಿಕೆಯ ಕಡೆ ಕಣ್ಣೆತ್ತಿ ಸಹ ನೋಡಲಿಲ್ಲ ವೆಂದೂ, ಪತ್ರಿಕೆಗಳು ವಾರ್ತೆಯನ್ನು ಪ್ರಕಟಿಸಿದವು. ಕವಿಯ ಮೌನಕ್ಕೆ ರಾಜಕಾರಣಿ ಹೆದರಿದನು. ಕವಿಯು ತೋರಿದ ಅನಾದರವನ್ನು ಯಾರಿಗೂ ಹೇಳದಂತೆ ನುಂಗಿಕೊಂಡನು! ಕುವೆಂಪು ಕನ್ನಡ ನಾಡಿನ ಜನಪ್ರಿಯ ಕವಿ. ಅವರು ಏಕೀಕೃತ ಕರ್ನಾಟಕದ ಅನಧಿಕೃತ ಶಾಸನ ಕರ್ತ!

ಅವರ 'ಜನಪ್ರಿಯ ರಾಮಾಯಣ' ದ ಉದ್ಘಾಟನೆ. ಮೈಸೂರಿನ ಮುಖ್ಯ ಮಂತ್ರಿಗಳಿಂದ ನೆರವೇರಿದ ಸಂದರ್ಭದಲ್ಲಿ ಕುವೆಂಪು ಅದೇ ಮಾತನ್ನು ಹೇಳಿದರು. 'ಇಂದು ಬಂದು ನಾಳೆ ಹೋಹ ಸಚಿವ ಮಂಡಲ ನಮ್ಮ ನಿತ್ಯ ಮಂತ್ರಿ ಮಂಡಲವಲ್ಲ ನೃಪತುಂಗನೇ ಚಕ್ರವರ್ತಿ. ಪಂಪನೇ ಮಂತ್ರಿ. ರನ್ನ ಜನ್ನ ನಾಗವರ್ಮ, ರಾಘವಾಂಕ ಹರಿಹರ, ಬಸವೇಶ್ವರ, ನಾರಣಪ್ಪ ಸರ್ವಜ್ಞ ಷಡಕ್ಷರ, ಸರಸ್ವತಿಯೇ ರಚಿಸಿ ದೊಂದು ನಿತ್ಯ ಸಚಿವ ಮಂಡಲ" ಎಂದು ಮೈಸೂರಿನ ಮುಖ್ಯ ಮಂತ್ರಿಗಳ ಇದಿರಿನಲ್ಲೂ ಅದೇ ಮಾತು ಹೇಳಿದಾಗ ಕನ್ನಡದ ನಾಡು ಕುವೆಂಪುರವರನ್ನು ಅಭಿಮಾನದಿಂದ ನೆನೆಯಿತು!

ಕನ್ನಡ ಸೋಲಬಾರದು, ಕನ್ನಡವು ಹಿಂದೆ ಬೀಳಬಾರದು. ಇವತ್ತು ನಡೆದಿರುವ ಈ ರಾಜಕೀಯ ನಾಟಕ ಬರೆಯ ಹೊಟ್ಟೆ ಬಟ್ಟೆಗೆ, ಪಕ್ಷ

ಜಾತಿ ಕಲಹಕ್ಕೆ, ಹಮ್ಮ ಬಿಮ್ಮು ಸೊಮ್ಮಿಗೋಸುಗ, ಬಣ್ಣ ಚಿತ್ರ ಬಾಳಿಗೋಸುಗ, ಜೋಳವಾಳಿ ಕೂಳಿಗೋಸುಗ ನಡೆದಿದೆ.

ಕರ್ನಾಟಕ ಏನು ಬರಿ ಹೆಸರೆ? ಮಂತ್ರ ಕಣಾ! ಶಕ್ತಿ ಕಣಾ! ತಾಯಿ ಕಣಾ! ದೇವಿ ಕಣಾ! ಬೆಂಕಿ ಕಣಾ! ಸಿಡಿಲು ಕಣಾ! ಕಾವ ಕೊಲುವ ಒಲವ ಬಲವ ಪಡೆದ ಚಲದ ಚಂಡಿ ಕಣಾ! ಕಂಡ ಕಲಿಗಖಂಡ ದೇವಿ ಕಣಾ, ಕರ್ನಾಟಕ!

ರಾಜಕಾರಣಿ ಹೂಡಿದ ಬೂಟಾಟಿಕೆಯ ನಾಟಕ ಮುಗಿದ ಮೇಲೆ ಒಂಟಿಕೊಪ್ಪಲಿನ "ಉದಯ ರವಿ"ಯಲ್ಲಿ ಕುಳಿತುಕೊಂಡು ಕನ್ನಡದ ದೃಷ್ಟಾರ ದೃಶ್ಯವೊಂದನ್ನು ಕಂಡರು. ಕನ್ನಡನಾಡು ಒಂದಾಗಬೇಕೆಂದು ಹಂಬಲಿ ಸುವ ಕನ್ನಡದ ಮಕ್ಕಳೆಲ್ಲ ಒಂದು ಮಹಾದಿನದ ಶುಭ ಮುಹೂರ್ತದಲ್ಲಿ ತಮ್ಮ ಊರಿನ ಕೆರೆಗೂ ಹೊಳೆಗೂ ಗುಂಪಾಗಿ ನಡೆದು ಮಿಂದು ಮಡಿ ಯುಟ್ಟು ದೇವರಿಗೆ ಈ ಮಂತ್ರದೀಕ್ಷೆಯನ್ನು ಕೈಕೊಳ್ಳುತ್ತಾರೆ.

ದೀಕ್ಷೆಯ ಕೊಡು ಇಂದೇ
ಕಂಕಣ ಕಟ್ಟಿಂದೇ!
ಕನ್ನಡ ನಾಡೊಂದೇ!
ಇನ್ನೆಂದೂ ತಾನೊಂದೇ!

ಕನ್ನಡ ಗೆಲ್ಲಬೇಕೆಂಬ ಕಳಕಳಿಯಿದ್ದವರು ಕೂಡಲ ಸಂಗನ ಹೆಸರಿನಲ್ಲಿ, ಗದುಗಿನ ವೀರನಾರಾಯಣನ ಹೆಸರಿನಲ್ಲಿ, ನೃಪತುಂಗನ ಹೆಸರಿನಲ್ಲಿ, ನಮ್ಮ ಕವಿ ಕುವೆಂಪು ಹೇಳಿದಂತೆ ಆಣೆ ಮಾಡಲಿ. ಕನ್ನಡಕ್ಕಾಗಿ ಕನ್ನಡದ ಒಂದೊಂದು ಕೂಸೂ ಪ್ರತಿಜ್ಞೆ ಮಾಡಲಿ. ಕನ್ನಡಕ್ಕಾಗಿ ಕಂಕಣ ಕಟ್ಟಲಿ, ದೀಕ್ಷೆಗೊಳ್ಳಲಿ? ಮಂತ್ರದೀಕ್ಷೆಯನ್ನು ಕೈಕೊಂಡಾಗ ಕನ್ನಡ ಯಾಕೆ ಹಿಂದೆ ಬಿದ್ದೀತು?

---

# ಕನ್ನಡಿತಿಯ ಆಹ್ವಾನ!

ನವಿಲುಗುಂದದ ಕತೆ ಕನ್ನಡನಾಡಿನ ಕತೆ! ಆಕೆ ಹರಿಜನ ಹೆಣ್ಣು ಮಗಳು. ಹೆಸರು ಗಾಳೆವ್ವ. ಅಡ್ಡ ಹೆಸರು ಹುಣಸೀಮರದ.

ಕನ್ನಡದ ಜನ ನವಿಲುಗುಂದದ ಗಾಳೆವ್ವನ ಹೆಸರನ್ನು ತಮ್ಮ ಎದೆಯಲ್ಲಿ ಬರೆದಿಟ್ಟುಕೊಳ್ಳಲಿ. ಆಕೆ ಓದು ಬರೆಹ ಬಲ್ಲವಳಲ್ಲ. ವಚನ ಶಾಸ್ತ್ರ ರಹಸ್ಯವನ್ನು ಬಲ್ಲವಳಲ್ಲ. ಉಪನಿಷತ್ತನ್ನು ಬಲ್ಲವಳಲ್ಲ. 'ಅಂತರಾತ್ಮ' ನೆಂಬ ವಿಚಿತ್ರ ಪ್ರಾಣಿ ಇದೆಯೊ ಇಲ್ಲವೊ ಹೇಳಬರದು. ಏನೂ ಅವಳಿಗೆ ತಿಳಿಯದು. ಆದರೆ ಒಂದು ಮಾತು ಮಾತ್ರ ಅವಳಿಗೆ ತಿಳಿದಿದೆ. ಆಗದವರಿಂದ ಕನ್ನಡ ನಾಡು ಶೋಷಣೆಗೆ ಈಡಾಗಿದೆ.

ಇಷ್ಟು ಹೊಳೆಗಳಿವೆ. ಬೆಳಕು ಬೀರಬಹುದಾದ ತಡಸಲುಗಳಿವೆ. ಅರಣ್ಯ ತುಂಬಿವೆ. ಫಲವತ್ತಾದ ಭೂಮಿ ಹೆಜ್ಜೆ ಹೆಜ್ಜೆಗೂ ಇದೆ. ಮನೆ ಮನೆಗಳ ತುಂಬ ಕೈಗಾರಿಕೆ ಜಾಳಿಗೆಯಂತೆ ಹಬ್ಬಿದೆ. ಆದರೂ ಕನ್ನಡ ನಾಡಿಗೆ ಬಂದ ದುರ್ವಿಪತ್ತೇನಿದು ? ಕಾರಣ ಮಾತ್ರ ಗಾಳೆವ್ವನಿಗೆ ತಿಳಿಯದು. ಆದರೆ ಇಷ್ಟು ಮಾತ್ರ ನಿಜ. ಯಾರೋ ಆಗದವರು ಈ ನಾಡಿಗೆ ಅನ್ಯಾಯ ಮಾಡುತ್ತಿದ್ದಾರೆ.

ಅಂತ ಅಭಿಪ್ರಾಯ ಗಾಳೆವ್ವನದು. ಮತ್ತು ಅವಳ ಪಾಲಿಗೆ ಸೂತಕವಿಲ್ಲ. ಆದರೆ ಕೃತಿ ಆಕೆಯ ಪಾಲಿನ ಮಂತ್ರ. ನಮ್ಮ ವಣಿಕ ಸಂಘದ ಕಾರ್ಯಾಧ್ಯಕ್ಷರು ಏಕೀಕರಣದ ಧ್ಯೇಯಸಿದ್ಧಿಗಾಗಿ ಎರಡು ಲಕ್ಷ ಹಣ ಕೂಡಿಸಲು ಅಂದು ನಿರ್ಧರಿಸಿ ಸಂಗತಿಯನ್ನು ನಾಡು ಬಲ್ಲದು. ಗದುಗಿನ ಯಳಮಲಿ ಶಾಂತಪ್ಪನವರು ಈ ಕೆಲಸವನ್ನು ವಿಶ್ವಾಸದಿಂದ ನಡಿಸಲು ಮುಂದಾದರು.

ಗಾಳೆಮ್ಮನಿಗೆ ತಿಳಿಯಿತು. ಕನ್ನಡ ನಾಡು ಶತಮಾನಗಳ ದಾಸ್ಯದಿಂದ ಕೊಳೆಯುತ್ತಿದೆ. ಹಿಂದುಸ್ತಾನಕ್ಕೆ ಸ್ವತಂತ್ರ ಬಂದ ಮೇಲೂ ಕನ್ನಡ ದೇವಿಯ ಕಷ್ಟ ಹಿಂಗಲಿಲ್ಲ. ತಾಯಿ ಕಣ್ಣೀರು ಹಾಕುತ್ತಿದ್ದಾಳೆ. ಕನ್ನಡ ತುಂಗೆ, ಕೃಷ್ಣೆ, ಕಾವೇರಿಯರು ಹಾಡಿಕೊಂಡು ಅಳುತ್ತಿದ್ದಾರೆ.

ಈ ನಾಡಿಗೆ ಎಂತ ಕಷ್ಟ ಬಂದಿತೋ! ಮಕ್ಕಳ ಕೈಯಿಂದಲೇ ವಿಷದ ಬಟ್ಟಲು ಕುಡಿಯುವಂತಾಯಿತೋ? ಯಾರ ಪಾಪದ ಫಲವೊ! ಯಾರ ಆಸೆ ಆಮಿಷಗಳೋ! ಯಾವ ಶಕುನಿಯ ಕುತಂತ್ರವೊ!

ರಾಜಕಾರಣಿಯು ಶಕುನಿಯಾಗಿದ್ದಾನೆ. ರಾಜಧಾನಿಯ ಮೇಜಿನ ಮೇಲೆ ಚದುರಂಗದಾಟವಾಡುತ್ತಿದ್ದಾನೆ. ತತ್ ಪರಿಣಾಮವೇನು?

ಕನ್ನಡ ದೇವಿಯ ಮಾನಭಂಗವಾಗುತ್ತಿದೆ. ಎರಡು ಕೋಟಿ ಮಕ್ಕಳ ಇದಿರಿನಲ್ಲಿಯೇ ಭುವನೇಶ್ವರಿಯ ಮಾನಹಾನಿಯಾಗುತ್ತಿದೆ!

ಆದರೂ ಶಕುನಿಗೆ ನಗು, ಅವನಿಗೆ ಅವನ ಅಧಿಕಾರದ ಆಸೆ. ಅವನ ಪಕ್ಷವೆ ಜಯಾ ಜಯ. ಅವನ ಲಾಭವೇ ಲಾಭ.

ಗಾಳೆಮ್ಮನ ಹೃದಯ ತುಂಬಿತು. ಕಣ್ಣು ಕಲಕಿದವು. ಎದೆ ಮುಟ್ಟಿಕೊಂಡು ನೋಡಿದಳು. ತಾಯಿ ಭುವನೇಶ್ವರಿ ನಕ್ಕಂತೆ ಆಯಿತು.

ನಿನ್ನ ಅಭಿಮಾನವೇನು ಗಾಳೆಮ್ಮ...............?

ಎರಡು ರೂಪಾಯಿ, ಒಡವಿ, ದೀನೆ, ದಲಿತೆ. ಪತಿತೆ............

ನಂಬುಗೆಯು ದೇವರು. ಶ್ರದ್ಧೆಯ ದೇವರು, ವಿಶ್ವಾಸವೆ ಪುಣ್ಯ, ಸತ್ಯ ತ್ಯಾಗಗಳೇ ಬಾಳಿನ ಅಮೃತ ಮಂತ್ರ.

'ಶಾಂತಪ್ಪನವರೆ, ಬಡವಿಯ ಈ ಎರಡು ರೂಪಾಯಿಗಳನ್ನು ಸ್ವೀಕರಿಸಿರಿ. ಇಷ್ಟೇ ನನ್ನ ಸಂಪಾದನೆ. ಈ ಎರಡು ರೂಪಾಯಿಗಳಲ್ಲಿ ಎರಡು ಕೋಟಿ ಕನ್ನಡ ಜನತೆಯ ಅಭಿಮಾನ ತುಂಬಿದ್ದೇನೆ. ದೇವರು ಕನ್ನಡ ದೇವಿಯ ಸಂಕಷ್ಟ ನಿವಾರಣೆ ಮಾಡಲಿ.'

ಗಾಳೆಮ್ಮನಿಂದ ಬಂದ ಪತ್ರ ಹಾಗು ಶುಭಹಾರಯಿಕೆ ಶಾಂತಪ್ಪನವರ ಅಭಿಮಾನವನ್ನು ಹಿಗ್ಗಿಸಿತು. ಅವರು ಬರೆದರು.

ಗಾಳಮ್ಮನ ಕೊಡುಗೆ ಆದರ್ಶ ಕೊಡುಗೆ. ಆಕೆ ಆದರ್ಶ ಕನ್ನಡಿತಿ.

ಕನ್ನಡದ ಮುನ್ನಡಿಗೆ ಕಾಲ್ತೊಡಕನ್ನು ಹಾಕುತ್ತಿರುವ ದುಷ್ಟ ಶಕ್ತಿಗಳಿಗೆ, ಕನ್ನಡದ ಏಳ್ಗೆಯ ದಾರಿಯಲ್ಲಿ ತಮ್ಮ ಸ್ವಾರ್ಥದ ಬಂಡೆಗಲ್ಲನ್ನೆತ್ತಿ ತದೊಡ್ಡುತ್ತಿರುವ ಶಕುನಿಗಳಿಗೆ ನವಿಲುಗುಂದದ ಈ ಹರಿಜನ ಹೆಣ್ಣುಮಗಳು ಆಹ್ವಾನವೀಯುತ್ತಿದ್ದಾಳೆ!

ಅಂದು ಕವಿ ಬೇಂದ್ರೆಯವರ ಕನಸಿನಲ್ಲಿ ಬಂದು ನಿಂತ ತಾಯಿಯೇ ಬಹುಶಃ ಈ ಗಾಳೆಮ್ಮನೇ ಇರಬಹುದೇನೊ! ಬೇಂದ್ರೆಯವರು ಹಾಕಿದ ಸವಾಲೇ ಈ ತಾಯಿಯ ಸವಾಲು. ಅದೇ ಕನ್ನಡಿತಿಯ ಆಹ್ವಾನ! 'ಗಂಡ್ಸಾದರೆ ತಾಯ್ನಾಡಿಗೆ ನಿನ್ನ ಬಲಿಕೊಡವೆಯೇನು?'





# ಕಲ್ಪನಾ ಗ್ರಂಥಮಾಲೆಯ ಪ್ರಕಟನೆಗಳು

| | | | | |
|---|---|---|---|---|
| ೧ | ಹಾಲಾಹಲ | ಹಿರೇಮಲ್ಲೂರ ಈಶ್ವರನ್ | ೧ | ೧೨ |
| ೨ | ರಾಮಣ್ಣ ಮಾಸ್ತರು | ಮಿರ್ಜಿ ಅಣ್ಣಾರಾಯ | ೨ | ೦ |
| ೩ | ಫಲ ಸಂಚಯ | ವರದರಾಜ ಹುಯಿಲಗೋಳ | ೧ | ೮ |
| ೪ | ರಾಜಾರಾಣಿ ದೇಖೋ | ಹಿರೇಮಲ್ಲೂರ ಈಶ್ವರನ್ | ೧ | ೮ |
| ೫ | ಶಿವನ ಬುಟ್ಟಿ | ಹಿರೇಮಲ್ಲೂರ ಈಶ್ವರನ್ | ೧ | ೮ |
| ೬ | ಮುಗಿಲ ಜೇನು | ಸಿಂಪಿ ಲಿಂಗಣ್ಣ | ೧ | ೧೨ |
| ೭ | ಕನ್ನಡ ತಾಯ್‌ನೋಟ | ಹಿರೇಮಲ್ಲೂರ ಈಶ್ವರನ್ | ೧ | ೮ |
| ೮ | ಕಾಮಾಕ್ಷಿ | ಚೆನ್ನವೀರ ಕಣವಿ | ೧ | ೦ |
| ೯ | ಅರವಿಂದರ ಪತ್ರಗಳು | ಸಿಂಪಿ ಲಿಂಗಣ್ಣ | ೦ | ೮ |
| ೧೦ | ಕರ್ನಾಟಕದ ಸಮರಭೇರಿ | ಶ್ರೀಧರ ತೇಲ್ಕರ್ ಮತ್ತು ಹಿರೇಮಲ್ಲೂರ ಈಶ್ವರನ್ | ೨ | ೦ |
| ೧೧ | ಭಾರತದ ಭವ್ಯ ಸಿದ್ಧತೆ | ಸಿಂಪಿ ಲಿಂಗಣ್ಣ | ೧ | ೦ |


## ಕಲ್ಪನಾ ಗ್ರಂಥ ಪ್ರಕಾಶನ ಸಮಿತಿ

ಹುಬ್ಬಳ್ಳಿ

COVER PRINTED AT
NATIONAL PRINTERS & ADVERTISERS
BOMBAY-1